# ಹೊಸಿಲ ದಾಟುವ
# ಹೆಜ್ಜೆಗಳು






ಸಂಯೋಜನೆ :
ಸವಿತಾ ಶಶಿಧರ್, ಉಷಾ ರಾಣಿ, ಅಮೃತಾ,
ಬೆಂಗಳೂರು

**ಮಹಿಳಾ ಸಮಖ್ಯಾ ಕರ್ನಾಟಕ**

ನಂ 68, 1ನೇ ಅಡ್ಡರಸ್ತೆ 2ನೇ ಮುಖ್ಯರಸ್ತೆ, ಹೆಚ್. ಎ. ಎಲ್.
3ನೇ ಹಂತ, ಜೀವನ ಭೀಮನಗರ, ಬೆಂಗಳೂರು - 560 075
ಟೆಲಿಫೋನ್ : 080-5277471 / 5262988,
ಫ್ಯಾಕ್ಸ್ : 080-5297765, Email : mahila@mahiti.org

## ಹೆಜ್ಜೆಗೆ ಹೆಜ್ಜೆ ಸೇರಿಸಿದವರು

ಪ್ರತೀ ಜಿಲ್ಲೆಯಲ್ಲಿ ಪ್ರಾಯೋಗಿಕ ಅಧ್ಯಯನ ಕಾರ್ಯಾಗಾರಗಳಲ್ಲಿ ಭಾಗವಹಿಸಿದ ಸಮಖ್ಯಾ ಬಳಗದವರು

| | | |
|---|---|---|
| ಬೀದರ್ | : | ಲಕ್ಷ್ಮೀ ಬಾಯಿ, ಕಮಲಾ, ಸರಸ್ವತಿ ವಡಗಾಂವ್, ಶೈಲಾ ಶೆಟ್ಟಿ, ಚಂದ್ರಕಲಾ |
| ಗುಲ್ಬರ್ಗಾ | : | ಪಾರ್ವತಿ, ಭಾರತಿ, ಕಮಲಾ, ರಷೀದಾ ಬೇಗಂ, ಜಗದೇವಿ ಯಲಾಲ್ |
| ರಾಯಚೂರು / ಕೊಪ್ಪಳ | : | ರೇಣುಕಾ ಜಿ., ಶಂಕ್ರಮ್ಮ ಹೀರೇಮಠ್, ದಾಕ್ಷಾಯಿಣಿ, ವಿಜಯಲಕ್ಷ್ಮೀ, ವಿಮಲಾಕ್ಷಿ ಹಿರೇಮಠ್ |
| ಬಿಜಾಪುರ | : | ಗಂಗು ಬಿ. ಕುಲಕರ್ಣಿ, ರಾಜೇಶ್ವರಿ, ಸುನಂದ ಮಾದರ್, ಕಮಲಾಬಾಯಿ, ಸರಸ್ವತಿ |
| ಮೈಸೂರು | : | ದೇವಿರಮ್ಮ ಕಮಲ, ಶೀಲಾ ಖರೆ |
| ಬಳ್ಳಾರಿ | : | ಯಶೋಧ, ಗಂಗಮ್ಮ, ಗೌರಿ |

**HOSILA DATUVA HEJJEGALU** - HANDBOOK FOR GENDER TRAINERS

Published By :
**MAHILA SAMAKHYA KARNATAKA**
No. : 389, Ist Cross, 12th Main Hal II Stage, Bangalore - 560 008
Phone : 5277471, 5262988 Fax : 5297765 Email : mahila@mahiti.org

'ಹೊಸಿಲ ದಾಟುವ ಹೆಜ್ಜೆಗಳು' - ಲಿಂಗತ್ವ ತರಬೇತಿ ಕೈಪಿಡಿ

| | | |
|---|---|---|
| ಪುಟಗಳು | : | 76 |
| ಮೊದಲ ಮುದ್ರಣ | : | 1999 |
| ರಕ್ಷಾಪುಟ ಮತ್ತು ಚಿತ್ರಗಳು | : | ಜಗದೀಶ್ ಅಮ್ಮುಂಜೆ, ಜಗತ್ ಮಂಗಳೂರು |
| ವಿನ್ಯಾಸ | : | ವಾಣಿ ಪೆರಿಯೋಡಿ |
| ಅಕ್ಷರ ಜೋಡಣೆ | : | ಜಗತ್ ಆರ್ಟ್ಸ್, ಮಂಗಳೂರು |
| ಮುದ್ರಕರು | : | ಆದಿತ್ಯ ಪ್ರಿಂಟರ್ಸ್ |

# ಒಳಗಿನ ಹೆಜ್ಜೆಗಳು

# ಹೆಜ್ಜೆಗಳಿಗೆ ಮುನ್ನ

ನಮ್ಮ ಕಾರ್ಯಕ್ರಮ ಭಾರತ ಸರಕಾರದ ಮಾನವ ಸಂಪನ್ಮೂಲ ವಿಭಾಗದ ಒಂದು ಯೋಜನೆ. ನಮ್ಮ ಮುಖ್ಯ ಉದ್ದೇಶ ಶಿಕ್ಷಣದ ಮೂಲಕ ಮಹಿಳಾ ಸಶಕ್ತತೆ. ಮಹಿಳಾ ಸಂಘಟನೆಗಳ ಮೂಲಕ ಈ ಗುರಿಯನ್ನು ಸಾಧಿಸಲು ನಾವು ಶ್ರಮಿಸಿದ್ದೇವೆ. ಈಗಾಗಲೇ ನಾವು ಬೀದರ್, ಬಿಜಾಪುರ, ಗುಲ್ಬರ್ಗಾ, ಮೈಸೂರು, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಸಮಾರು 1000 ಹಳ್ಳಿಗಳಲ್ಲಿ 25,000 ಮಹಿಳೆಯರೊಂದಿಗೆ ಕೆಲಸ ಮಾಡುತ್ತಿದ್ದೇವೆ.

ಕಳೆದ ದಶಕದಿಂದ ಮಹಿಳಾ ಸಮಖ್ಯಾವು ಬಡ ಮಹಿಳೆಯರಿಗೆ ಹತ್ತಿರವಾಗಿ ಅವರೊಡನೆ ಕೆಲಸ ಮಾಡುತ್ತಿದೆ. ಆದರೆ ಮಹಿಳೆಯರ ಹೀನ ಸ್ಥಿತಿ ಸ್ಥಾನಮಾನಗಳು ಲಿಂಗಭೇದ ಸಮಾಜದ ಕೊಡುಗೆ ಎಂಬ ಅರಿವನ್ನು ಅವರಲ್ಲಿ ಮೂಡಿಸುವುದು ಸಮಖ್ಯಕ್ಕೆ ಒಂದು ಸವಾಲಾಗಿ ಪರಿಣಮಿಸಿತ್ತು. ಈ ಒಂದು ದಶಕದ ಪಯಣದ ಹಾದಿಯಲ್ಲಿ ನಾವು ಕಂಡ, ಅನುಭವಿಸಿದ ಘಟನೆಗಳು, ಹೇಗೆ ಲಿಂಗಭೇದದ ಪರಿಣಾಮದಿಂದಾಗಿ ಮಹಿಳೆಯರು ತಮ್ಮ ದೈನಂದಿನ ಬದುಕಿನಲ್ಲಿ ತಮಗೆ ಸಿಗಬೇಕಾದ ಗೌರವ ಆತ್ಮಾಭಿಮಾನಗಳಿಗಾಗಿ ಹೊಡೆದಾಡಬೇಕು ಎಂಬುದನ್ನು ಅರಿವು ಮಾಡಿಕೊಟ್ಟವೆ. ಸಂಘ ಮಹಿಳೆಯರ ಬೆಂಬಲದಿಂದಾಗಿ ಈ ಘಟನೆಗಳನ್ನು ವಿಶ್ಲೇಷಿಸಲು ಹಾಗೂ ಈ ಘಟನೆಗಳನ್ನು ಎದುರಿಸಿ ತೊಂದರೆಗಳನ್ನು ಪರಿಹರಿಸುವ ನಿಟ್ಟಿನಲ್ಲಿ ಮುಂದುವರಿಯಲು ಮಹಿಳಾ ಸಮಖ್ಯಾದ ಪ್ರಯತ್ನ ನಡೆದಿದೆ.

ಈ ಕೈಪಿಡಿಯಲ್ಲಿ ಬಡ ಮಹಿಳೆಯರ ಇಂತಹ ಹಲವಾರು ಅನುಭವಗಳ ಸಮೃದ್ಧ ಜ್ಞಾನವನ್ನು ಮುಂದಿನ ಅಧ್ಯಯನ ಹಾಗೂ ಉಪಯೋಗಗಳಿಗಾಗಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೇ ಈ ಕೈಪಿಡಿಯು ಕೇವಲ ಮಹಿಳಾ ಸಮಖ್ಯಾಕ್ಕೆ ಮಾತ್ರವಲ್ಲದೇ ಇತರ ಸಂಘ ಸಂಸ್ಥೆಗಳಿಗೂ ಸಹ ಲಾಭದಾಯಕವಾಗಬಹುದಾಗಿದೆ.

ಕಳೆದ ಎರಡು ವರ್ಷಗಳಲ್ಲಿ ಮಹಿಳಾ ಸಮಖ್ಯಾ ಕರ್ನಾಟಕವು ಲಿಂಗತ್ವಕ್ಕೆ ಸಂಬಂಧಿಸಿದಂತೆ 1. ಲಿಂಗತ್ವ ಸಿದ್ಧಾಂತ ಮತ್ತು ಅಳವಡಿಕೆ 2. ಕುಸುಮ ಎಂಬ ಎರಡು ಕೈಪಿಡಿಗಳನ್ನು ಹೊರತಂದಿದೆ. ಮೊದಲನೆಯದು, ಲಿಂಗತ್ವ ಕುರಿತಂತೆ, ಸಿದ್ಧಾಂತ ಹಾಗೂ ಮಾಹಿತಿಗಳನ್ನು ಒಳಗೊಂಡಿದೆ. ಈ ಕೈಪಿಡಿ ವಿವಿಧ ಸಂಘ ಸರ್ಕಾರೇತರ ಸಂಸ್ಥೆಗಳಿಗೆ ಬಹುಪಯೋಗಿ ಸಾಧನವಾಗಬಲ್ಲುದಾಗಿದೆ.

'ಕುಸುಮ' ಕೈಪಿಡಿಯು ಮುಖ್ಯವಾಗಿ ಗ್ರಾಮೀಣ ಯುವಕರ ಸಹಾಯದಿಂದಲೇ ಗ್ರಾಮೀಣ ಯುವಕರಿಗಾಗಿ ಅಭಿವೃದ್ಧಿಗೊಂಡಂತಹ ಕೃತಿ. ಮೂರನೆಯದಾದ ಹೊಸಿಲ ದಾಟುವ ಹೆಜ್ಜೆಗಳು !! ಮುಖ್ಯವಾಗಿ ಗ್ರಾಮೀಣ ಬಡ ಮಹಿಳೆಯರಿಗಾಗಿ ತಯಾರಿಸಿರುವಂತಹುದು. ಈ ಕೈಪಿಡಿಯಲ್ಲಿರುವ ಎಲ್ಲ ಅಭ್ಯಾಸಗಳೂ ನಮ್ಮ ಮಹಿಳೆಯರ ದೈನಂದಿನ ಬದುಕಿನ ಸಿಹಿ ಕಹಿ ಅನುಭವಗಳ ಭಂಡಾರದಿಂದ ಹೆಕ್ಕಿ ತೆಗೆದಂತಹುದು. ಇವರ ಬದುಕನ್ನು ನೋಡಿ ಇವರ ಅನುಭವಗಳನ್ನು ಕೇಳಿ ನಾವು ಕಲಿತ ವಿಷಯಗಳು ಅಪಾರ. ಬಹುಶಃ ಅವರಿಂದಲೇ ಈ ಕೈಪಿಡಿ ಇಷ್ಟು ಸಮೃದ್ಧವಾಗಲು ಸಾಧ್ಯವಾಯಿತು. ಅವರು ನಮಗೆ ಸ್ಫೂರ್ತಿ ಚಿಲುಮೆ ಎಂದೇ ಹೇಳಬೇಕು. ಅಲ್ಲದೇ ಉಳಿದೆಲ್ಲಾ ಕೈಪಿಡಿಗಳಂತೆಯೇ ಇದೂ ಸಹ ವಿವಿಧ ರೀತಿಯಲ್ಲಿ ವಿವಿಧ ಸಂದರ್ಭಕ್ಕೆ ತಕ್ಕಂತೆ ಬಳಸಬಹುದಾಗಿದೆ.

ಹೆಜ್ಜೆಗಳನ್ನು ಈ ರೂಪಕ್ಕೆ ತರುವ ಪ್ರಕ್ರಿಯೆಯಲ್ಲಿ ಲಿಂಗತ್ವಕ್ಕೆ ಸಂಬಂಧಿಸಿದಂತೆ ತಮ್ಮ ಅಪಾರ ಜ್ಞಾನವನ್ನು ಹೆಜ್ಜೆಗಳ ಪ್ರಾರಂಭದಿಂದ ಅಂತ್ಯದವರೆಗಿನ ಪ್ರಕ್ರಿಯೆಗೆ ಧಾರೆಯೆರೆದ ಶ್ರೀಮತಿ ವಾಣಿ ಪೆರಿಯೋಡಿಯವರಿಗೆ ಕೃತಜ್ಞತೆ ಹೇಳಲು ಮಹಿಳಾ ಸಮಖ್ಯಾ ಕರ್ನಾಟಕವು ಈ ಅವಕಾಶವನ್ನು ತೆಗೆದುಕೊಳ್ಳುತ್ತದೆ. ಮಹಿಳಾ ಸಮಖ್ಯಾ ಕರ್ನಾಟಕದ ಇಡೀ ತಂಡವು ಬಹಳ ಸಂತಸ ಹಾಗೂ ಸೃಜನ ಶೀಲತೆಯನ್ನು ಅನುಭವಿಸಿದೆ. ವಾಣಿಯವರು ಅಳವಡಿಸಿಕೊಂಡ ಪ್ರತಿಯೊಬ್ಬರ 'ಭಾಗವಹಿಸುವಿಕೆಯ' ಪ್ರಕ್ರಿಯೆಯು ಮಹಿಳಾ ಸಮಖ್ಯಾ ಕರ್ನಾಟಕದ ಪ್ರತಿಯೊಬ್ಬರಿಗೂ ಕಲಿಕೆಯ ಅವಕಾಶವನ್ನು ಕಲ್ಪಿಸಿಕೊಟ್ಟಿದೆ.

ಅಲ್ಲದೇ ಈ ಹೆಜ್ಜೆಗಳನ್ನು ಇಡಲು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಬೆಂಬಲ ನೀಡಿದ ಎಲ್ಲರಿಗೂ ಮಹಿಳಾ ಸಮಖ್ಯಾ ಕರ್ನಾಟಕವು ಚಿರಋಣಿಯಾಗಿರುತ್ತದೆ.

ಶುಭಾಶಯಗಳೊಡನೆ,

ರೇವತಿ ನಾರಾಯಣನ್
ರಾಜ್ಯ ಕಾರ್ಯಕ್ರಮ ನಿರ್ದೇಶಕರು

# ಹೆಜ್ಜೆಗಳ ಹಿಂದೆ...

ಹೆಜ್ಜೆಗಳ ದನಿ ಕೇಳಿಸುತ್ತಿದೆಯೇ
ಕೇಳಿಸಲೇ ಬೇಕೆಂಬುದು ನಮ್ಮ ಆಶೆ
ಯಾಕೆಂದರೆ... ಇವು ಹೆಜ್ಜೆಗಳು
ಅದೂ ಒಬ್ಬಿಬ್ಬರ ಹೆಜ್ಜೆಗಳಲ್ಲ
ನೂರಾರು... ಸಾವಿರಾರು... ಮಹಿಳೆಯರ ಹೆಜ್ಜೆಗಳು
ಸಾಮಾನ್ಯ ಮಹಿಳೆಯರ ಸಾಧನೆಯ ಹೆಜ್ಜೆಗಳು
ಹೊಸಿಲು ದಾಟುವ ಹೆಜ್ಜೆಗಳು...

ಗ್ರಾಮೀಣ ಮಹಿಳೆಯರು ಸಮಖ್ಯಾದ ಒಡನಾಟದಲ್ಲಿ
ಇಟ್ಟ ಹೆಜ್ಜೆಗಳು ಇವು
ತಮ್ಮನ್ನು ತಾವು ಕಂಡುಕೊಳ್ಳುತ್ತಾ
ಇಟ್ಟ ಹೆಜ್ಜೆಗಳು ಇವು
ಕನಸುಗಳನ್ನು ನನಸಾಗಿಸುವತ್ತ
ಇಟ್ಟ ಹೆಜ್ಜೆಗಳು ಇವು
ಹೊಸ ಆಲೋಚನೆಗಳನ್ನು ಹುಟ್ಟು ಹಾಕಿದ
ದಿಟ್ಟ ಹೆಜ್ಜೆಗಳು ಇವು.

ಇತಿಹಾಸ ಮಹಿಳೆಯರ ಹೆಜ್ಜೆಗಳನ್ನು ಅಳಿಸಿ ಹಾಕಿದೆ. ಅದಕ್ಕಾಗಿ ಸಮಖ್ಯಾ ಮಹಿಳೆಯರ ಹೆಜ್ಜೆಗಳನ್ನು ದಾಖಲಿಸುವ, ಅದರಿಂದಲೇ ಮತ್ತೆ ಮತ್ತೆ ಕಲಿಯುವ ಬೆಳೆಯುವ, ಸಮಾಜದಲ್ಲಿ ನಿಧಾನವಾಗಿ ವ್ಯಾಪಿಸುವ ಹೊಸ ಇತಿಹಾಸ ಸ್ಥಾಪಿಸುವ ಮುಗಿಲೆತ್ತರದ ಕನಸೊಂದನ್ನು ಕಾಣುತ್ತಿದೆ.

## ಹೆಜ್ಜೆಗಳು ಮೂಡಿದ್ದು ಹೀಗೆ...

ಕಾರ್ಯಕ್ಷೇತ್ರದ ಅನುಭವಗಳನ್ನು, ನಡೆದ ಪ್ರಕರಣಗಳನ್ನು ಇಟ್ಟುಕೊಂಡೇ ಲಿಂಗತ್ವದ ಪರಿಕಲ್ಪನೆಗಳನ್ನು ಇನ್ನಷ್ಟು ಆಳವಾಗಿ ಅರ್ಥ ಮಾಡಿಕೊಳ್ಳಬೇಕೆನ್ನುವ ಆಶಯವನ್ನು ಸಮಖ್ಯಾ ಹೊಂದಿದೆ. ಅದಕ್ಕಾಗಿ, ಮೊತ್ತ ಮೊದಲು ಸಮಖ್ಯಾ ಕೆಲಸ ಮಾಡುವ ಪ್ರತಿಯೊಂದು ಜಿಲ್ಲೆಯಿಂದ ಹಾಗೂ ಬೆಂಗಳೂರು ಕಛೇರಿಯಿಂದ ಒಂದಷ್ಟು ಮಂದಿ ಎರಡು ದಿನಗಳ ಕಾಲ ಸೇರಿಕೊಂಡು ಸಮಖ್ಯಾ ಪ್ರಕ್ರಿಯೆಯಲ್ಲಿ ನಡೆದ ಅನುಭವಗಳನ್ನು, ಪ್ರಕರಣಗಳನ್ನು ಒಟ್ಟು ಹಾಕಿದರು. ಲಿಂಗತ್ವದ ಪರಿಕಲ್ಪನೆಯ ಒಂದು ಸರಳ ಚೌಕಟ್ಟನ್ನು ಹರಿತಮಾಡಿಕೊಂಡರು.

ಇವನ್ನೆಲ್ಲಾ ಇಟ್ಟುಕೊಂಡು ಹೆಜ್ಜೆಗಳ ತರಬೇತಿ ವಿನ್ಯಾಸ ಮಾಡಲಾಯಿತು. ಸಮಖ್ಯಾ ತಂಡಕ್ಕೆ 4 ದಿನಗಳ ತರಬೇತಿ ನೀಡಲಾಯಿತು. ಲಿಂಗತ್ವದ ಸಿದ್ಧಾಂತ ಮತ್ತು ಪರಿಕಲ್ಪನೆಗಳನ್ನು ಸಂಘದ ಮಹಿಳೆಯರಿಗೆ ಮನದಟ್ಟು ಮಾಡುವುದಕ್ಕೆ ಒಂದು ವಿಧಾನ ಸಿಕ್ಕಿದ ತೃಪ್ತಿ ತಂಡಕ್ಕೆ ಆಯಿತು. ಇದರೊಂದಿಗೆ ತರಬೇತಿ ವಿಷಯ, ಸಾಮಗ್ರಿ, ವಿಧಾನಗಳಿಗೆ ಸಂಬಂಧಿಸಿದಂತೆ ತಂಡ ಸಲಹೆ, ಪ್ರತಿಕ್ರಿಯೆಗಳನ್ನು ನೀಡಿತು. ಇಲ್ಲಿ ಹಾಕಿರುವುದು ಸತ್ಯ ಘಟನೆಗಳಾದರೂ, ಪ್ರಕರಣಗಳಲ್ಲಿ ಊರು, ವ್ಯಕ್ತಿಗಳ ಹೆಸರುಗಳನ್ನು ವ್ಯಕ್ತಿಗಳ ಹಿತದೃಷ್ಟಿಯಿಂದಾಗಿ ಬದಲಾಯಿಸಿ ಕಾಲ್ಪನಿಕ ಹೆಸರುಗಳನ್ನು ನೀಡಲಾಗಿದೆ.

ಈ ಹಿನ್ನೆಲೆಯಲ್ಲಿ "ಹೆಜ್ಜೆಗಳು" - ತರಬೇತಿ ಕೈಪಿಡಿಯ ಮೊದಲ ಕರಡು ತಯಾರಾಯಿತು. ತರಬೇತಿ ಪಡೆದ ಸಮಖ್ಯಾ ತಂಡದವರು ಪ್ರತಿಯೊಂದು ಜಿಲ್ಲೆಯಲ್ಲಿ ಸಂಘ ಮಹಿಳೆಯರಿಗೆ ಪ್ರತ್ಯೇಕವಾಗಿಯೇ ಮೂರು ದಿನಗಳ ತರಬೇತಿ ನೀಡಿದರು. ತಮ್ಮದೇ ಅನುಭವಗಳ ಸುತ್ತ ಹೆಣೆದ ಹೆಜ್ಜೆಗಳನ್ನು ಸಂಘ ಮಹಿಳೆಯರು ಸಂಭ್ರಮದಿಂದ ಸ್ವಾಗತಿಸಿದರು.

ಪ್ರಕರಣಗಳೊಂದಿಗೆ ಬಹಳ ಸುಲಭವಾಗಿ ತಮ್ಮನ್ನು ತಾವು ಗುರುತಿಸಿಕೊಂಡರು. ಮತ್ತಷ್ಟು ಅನುಭವ, ಪ್ರಕರಣಗಳನ್ನು ಧಾರಾಳವಾಗಿ ಹಂಚಿಕೊಂಡರು.

ಪ್ರತಿಯೊಂದು ಜಿಲ್ಲೆಯಲ್ಲಿ ನಡೆದ ತರಬೇತಿಯ ಅನುಭವಗಳನ್ನು ಪರಸ್ಪರ ಹಂಚಿಕೊಂಡು ಕೈಪಿಡಿಯಲ್ಲಿ ಬೇಕಾದ ತಿದ್ದುಪಡಿಗಳನ್ನು ಮಾಡುವುದಕ್ಕಾಗಿ 2 ದಿನಗಳ ಕಾರ್ಯಾಗಾರ ನಡೆಸಲಾಯಿತು. ಈ ಅನುಭವದ ಆಧಾರದಲ್ಲಿ ಹೊಸಿಲ ದಾಟುವ ಹೆಜ್ಜೆಗಳು ಈ ಸ್ವರೂಪದಲ್ಲಿ ಮೂಡಿಕೊಂಡಿತು.

**ಹೆಜ್ಜೆಗಳನ್ನು ಬಳಸುವ ಮುನ್ನ :**

ಹೆಜ್ಜೆಗಳಲ್ಲಿ ತುಂಬಿರುವುದು ಸಮಖ್ಯಾ ಕಾರ್ಯಕ್ಷೇತ್ರದ ಸಮೃದ್ಧ ಅನುಭವಗಳು. ಜೀವಂತ ವ್ಯಕ್ತಿಗಳ ಜೀವಂತ ಸಾಧನೆಗಳು. ಆದಕ್ಕಾಗಿ ಇಲ್ಲಿಯ ಅರಿವೂ ಅಷ್ಟೇ ಜೀವಂತ. ಇದರಿಂದಲೇ ಮತ್ತೆ ಕಲಿಯ ಹೊರಟಿದ್ದೇವೆ. ಆದರೆ ಇವು ನಮಗೆ ಬರೇ ಕಲಿಕೆಯ "ವಸ್ತುಗಳು" ಎಂಬಂತೆ ನೋಡುವಂತಿಲ್ಲ. ಗೌರವದಿಂದ, ಮಾನವೀಯತೆಯಿಂದ, ಯಾರ ಬದುಕನ್ನೂ ಅಳೆಯದಂತೆ, ಹಳಿಯದಂತೆ ನೋಡಿ ಅರ್ಥ ಮಾಡಿಕೊಳ್ಳಬೇಕಾಗಿದೆ.

ಕಾರ್ಯಕ್ಷೇತ್ರದಲ್ಲಿ ಗೆಲುವಿನ ಜತೆಗೆ ಸೋಲಿನ ಅನುಭವಗಳೂ ಇವೆ. ಆದರೆ ಸದ್ಯಕ್ಕೆ ಈ ಕೈಪಿಡಿಗಾಗಿ ಗೆಲುವಿನ ಪ್ರಕರಣಗಳನ್ನೇ ಆಯ್ದು ಕೊಳ್ಳಲಾಗಿದೆ. ಇಲ್ಲಿಯ ಸಾಧನೆಗಳನ್ನು ಮಾಡಿದವರು ಎತ್ತರೆತ್ತರಕ್ಕೆ ಬೆಳೆದು ನಿಂತ ಅಸಾಧಾರಣ ಮಹಿಳೆಯರಲ್ಲ, ಇದು "ಅಂತಹಾ" ಮಹಿಳೆಯರಿಂದಲೇ ಸಾಧ್ಯ , ನಮ್ಮಿಂದಲ್ಲ , ಅಂತ ಹೇಳುವಂತಿಲ್ಲ, ಯಾಕೆಂದರೆ ಈ ಹೆಜ್ಜೆಗಳನ್ನು ಊರಿದವರು ಜನಸಾಮಾನ್ಯ ಮಹಿಳೆಯರು. ಅತ್ಯಂತ ಕಡಿಮೆ ಸಂಪನ್ಮೂಲಗಳನ್ನು ಹೊಂದಿರುವ ಮಹಿಳೆಯರ ಬದುಕಿನ ಕೂಗಿನಿಂದ ಅರಳಿದ ಹಾಡುಗಳು ಇವು.

ಲಿಂಗತ್ವದ ಪರಿಕಲ್ಪನೆಯ ಎಲ್ಲಾ ಆಯಾಮಗಳನ್ನು ಹೇಳುವಂತಹ ಪ್ರಕರಣಗಳು ಇಲ್ಲಿಲ್ಲ. ಉದಾಹರಣೆಗೆ, ಕುಟುಂಬ ಯೋಜನೆ, ಆರೋಗ್ಯ, ದೈಹಿಕ ಫಲವತ್ತತೆ, ದೇವದಾಸಿ ಪದ್ಧತಿ, ಇವೇ ಮುಂತಾದ ಅನೇಕ ವಿಚಾರಗಳಿಗೆ ಪ್ರಕರಣಗಳನ್ನು ಹೊಂದಿಸಲಾಗಿಲ್ಲ. ಪ್ರಕರಣಗಳನ್ನು ಉಪಯೋಗಿಸಿಕೊಂಡು ತರಬೇತಿ ಮಾಡುವುದಕ್ಕೆ ಇದೊಂದು ಮಾದರಿ ಆಗಿದೆ ಅಷ್ಟೆ. ಇದೇ ರೀತಿ ಅನೇಕಾನೇಕ ಪ್ರಕರಣಗಳನ್ನೇ ಎತ್ತಿಕೊಂಡು ತರಬೇತಿ ಮಾಡಬಹುದು. ಕೆಲವೊಮ್ಮೆ ಒಂದೇ ವಿಚಾರಕ್ಕೆ ಸಂಬಂಧಿಸಿದಂತಹ ಪ್ರಕರಣಗಳನ್ನೇ ಒಟ್ಟು ಹಾಕಿ ಆಯಾಯ ತರಬೇತಿಯಲ್ಲಿ ಉಪಯೋಗಿಸಬಹುದು. ಉದಾಹರಣೆಗೆ, ಆರೋಗ್ಯಕ್ಕೆ ಸಂಬಂಧಿಸಿರುವುದೇ ಪ್ರಕರಣಗಳನ್ನು ಒಟ್ಟುಹಾಕಿ ಆರೋಗ್ಯದ ತರಬೇತಿಯಲ್ಲಿ ಸಮೃದ್ಧವಾಗಿ ಉಪಯೋಗಿಸಬಹುದು.

ಇದರಲ್ಲಿ ಸುಮಾರು 4 ದಿನಗಳಿಗೆ ಆಗುವಷ್ಟು ತರಬೇತಿ ಸಾಮಗ್ರಿಗಳು ಇವೆ. ಸುಮಾರು 25ರಿಂದ 30 ಜನರ ಗುಂಪಿಗಾಗಿ ವಿನ್ಯಾಸ ಮಾಡಲಾಗಿದೆ. ನೀವು ನಿಮ್ಮ ಸಮಯವನ್ನು ನೋಡಿಕೊಂಡು ಉದ್ದೇಶಗಳಿಗೆ ತಕ್ಕಂತೆ ಚಟುವಟಿಕೆಗಳನ್ನು ಆರಿಸಿಕೊಳ್ಳಬಹುದು. ಪ್ರಕರಣಗಳನ್ನು (Case-studies) ಉಪಯೋಗಿಸುವುದಕ್ಕೆ ಕೆಲವು ವಿಧಾನಗಳನ್ನು ಪರಿಚಯಿಸಲಾಗಿದೆ. ಕಥೆಯಂತೆ ಬಾಯಲ್ಲಿ ಹೇಳುವುದು, ಓದಿ ಹೇಳುವುದು, ಗುಂಪುಗಳಿಗೆ ಓದಲು ಕೊಟ್ಟು ಚರ್ಚಿಸುವಂತೆ ಹೇಳುವುದು, ಗುಂಪುಗಳ ಮಧ್ಯ ವಾದ ವಿವಾದ ಏರ್ಪಡಿಸುವುದು, ಅರ್ಧ ಪ್ರಕರಣ ಕೊಟ್ಟು ಮುಂದಿನದನ್ನು ಊಹಿಸಲು ಹೇಳುವುದು, ನಾಟಕಗಳನ್ನು ಮಾಡುವುದು, ಇವೇ ಕೆಲವು ವಿಧಾನಗಳಿವೆ. ಇನ್ನೂ ಹೊಸ ವಿಧಾನಗಳನ್ನು ಹುಡುಕಬಹುದು.

ಈ ಹೆಜ್ಜೆಗಳು ಸೋಲದಿರಲಿ, ಕುಸಿಯದಿರಲಿ
ಹೆಜ್ಜೆಗಳೊಂದಿಗೆ ಹೆಜ್ಜೆಗಳು ಸೇರುತ್ತಾ
ಹೊಸ ಇತಿಹಾಸ ಹುಟ್ಟುಹಾಕುವಂತಾಗಲಿ
ಎಂಬ ಹಾರೈಕೆಯೊಂದಿಗೆ

**ವಾಣಿ ಪೆರಿಯೋಡಿ**

# ಹೇಗಿದ್ದೀರಿ ? ಚೆನ್ನಾಗಿದ್ದೀರಾ ?

1 ವಿಷಯ : ಸ್ವಾಗತ, ಪ್ರಸ್ತಾವನೆ

ಕನಿಷ್ಠ ಸಮಯ :

15 ನಿಮಿಷ

ತಯಾರಿ :

ತರಬೇತಿಗೆ ಸಂಬಂಧಿಸಿ, ಹೇಳಬೇಕಾದ ಅಂಶಗಳನ್ನು ಕಥೆ - ಊಟ - ವಸತಿ - ಸಮಯ - ವ್ಯವಸ್ಥೆ - ವಾತಾವರಣ ಇತ್ಯಾದಿಗಳನ್ನು ಗುರುತಿಸಿಟ್ಟು ಕೊಳ್ಳಬೇಕು.

ತಯಾರಿ :

'ಆರದ ದೀಪ' ಪುಟ - 9

ಉದ್ದೇಶ :

* ಮಹಿಳೆಯರನ್ನು ಆತ್ಮೀಯವಾಗಿ ಬರಮಾಡಿಕೊಳ್ಳುವುದು.
* ಅವರ ಬರುವಿಕೆಗೆ ಮಹತ್ವ ಕೊಡುವುದು.
* ತರಬೇತಿಯ ಆಗು-ಹೋಗಿಗೆ ಸಂಬಂಧಿಸಿದ ಮಾಹಿತಿ ಕೊಡುವುದು.

ಚಟುವಟಿಕೆ :

ಪ್ರೀತಿ, ಸಂತೋಷ - ತೋರಿಸಿ ಸ್ವಾಗತಿಸಿ.

ಸ್ವಾಗತಿಸುತ್ತಾ ಈ ತರಬೇತಿ ನಮ್ಮ ಬದುಕಿನಲ್ಲಿ ಒಂದು "ಅವಕಾಶ" - ಒಂದು "ದೀಪ"ದಂತೆ ಎಂಬುದನ್ನು ವಿವರಿಸಿ.

ಈ ಸಂದರ್ಭಕ್ಕೆ ಹೊಂದುವಂತಹ "ಆರದ ದೀಪ" ಕಥೆ ಹೇಳಿ. ಆಮೇಲೆ - "ಈಗ ಮಹಿಳೆಯರ ಕೈಗೆ ದೀಪ, ಎಣ್ಣೆ ಎಲ್ಲಾ ಸಿಗುತ್ತದೆ. ಈ ತರಬೇತಿಯೂ ಒಂದು ದೀಪ. ಇದನ್ನು ನಾವು ನಮಗೂ, ಇತರರಿಗೂ ಬೆಳಕು ಸಿಗುವ ಹಾಗೆ ಉಪಯೋಗಿಸಬೇಕು. ಆರಲಿಕ್ಕೆ ಬಿಡಬಾರದು. ಎಲ್ಲರೂ ಸೇರಿಕೊಂಡು, ಪ್ರೀತಿಯಿಂದ, ಸಂತೋಷದಿಂದ - "ಹೊಸ ಆಲೋಚನೆ" ಮಾಡಿಕೊಂಡು, ಬೇರೆಯವರಿಗೂ ಹಂಚಿಕೊಂಡು ಬೆಳೆಯುತ್ತಿದ್ದರೆ ಈ ದೀಪ ಆರುವುದಿಲ್ಲ, ನಿರಂತರವಾಗಿ ಉರಿಯುತ್ತಿರುತ್ತದೆ ಎನ್ನುವ ರೀತಿಯಲ್ಲಿ ನಿಮ್ಮದೇ ಸಹಜವಾದ ಮಾತಿನಲ್ಲಿ ವಿವರಣೆ ಕೊಡಿ.

ಗಮನಿಸಿ :

* ಮೊದಲ ಈ ಹಂತವನ್ನು ಅನಾವಶ್ಯಕ ಉದ್ದ ಎಳೆಯಬೇಡಿ.
* ಯಾರಿಗೂ ಬೈಯ್ಯಬೇಡಿ, ಸಮಾಧಾನದಿಂದ ವ್ಯವಹರಿಸಿ.
* ಶಿಬಿರಾರ್ಥಿಗಳು, ಇನ್ನೂ ಅವರ ಮಾತು-ಗಲ-ಗಲ ಮಾಡುತ್ತಿದ್ದರೆ, ಪ್ರೀತಿಯಿಂದ ಎಚ್ಚರಿಸಿ ನಿಮ್ಮ ಮಾತಿನ ಕಡೆಗೆ ಎಳೆದುಕೊಳ್ಳಿ.
* ಇಲ್ಲಿ ಯಾರೂ ಮಾತಾಡಬಹುದು, ಹೆಚ್ಚು - ಕಡಿಮೆ, ತಪ್ಪು - ಸರಿ ಎಂಬುದಿಲ್ಲ ಎಂಬ ಭರವಸೆ ಕೊಡಿ.
* ಪುನಃ ದೀಪ ಹಚ್ಚುವ, ಇರಿಸುವ ಕೆಲಸದ ಹೊರೆಯು ಮಹಿಳೆಯರ ಮೇಲೆ ಬೀಳುತ್ತದೆ. ಇದು ಮಹಿಳೆಯರದ್ದೇ ಕೆಲಸ ಎಂಬ ಅರ್ಥ ಬಾರದಿರುವಂತೆ ನೋಡಿಕೊಳ್ಳಿ. ಇದೊಂದು ಸಮಾಜಕ್ಕೇ ಹೊಸಬೆಳಕನ್ನು ಕೊಡುವ ದೀಪ. ಅದು ಎಲ್ಲರ ಒಳಿತಿಗಾಗಿ ನಾವು ಮಹಿಳೆಯರು ಮಾಡಬೇಕಾಗಿದೆ ಎಂಬ ಅರ್ಥ ಬರುವಂತೆ ವಿವರಣೆ ಕೊಡಿ.

ನಿರೀಕ್ಷಿತ ಫಲಿತಾಂಶ :

* ಬಂದ ಪ್ರತಿಯೊಬ್ಬ ಮಹಿಳೆಗೂ ತಮಗೆ ಇಲ್ಲಿ ಒಂದು ವಿಶೇಷ ಸ್ಥಾನವಿದೆ, ಪ್ರೀತಿ ಗೌರವ ಸಿಗುತ್ತದೆ ಅನ್ನುವ ವಿಶ್ವಾಸ ಬರಬೇಕು.
* ಊಟ - ವಸತಿ - ಸಮಯ - ವ್ಯವಸ್ಥೆಗಳ ಮಾಹಿತಿ ಸಿಗಬೇಕು.

ವೈಯಕ್ತಿಕ ಟಿಪ್ಪಣಿ :

# ಆರದ ದೀಪ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದ. ಒಮ್ಮೆ ಅವನು ತನ್ನ ರಾಜ್ಯದ ಸ್ಥಿತಿ-ಗತಿ ಹೇಗಿದೆ ಎಂಬುದನ್ನು ನೋಡಬೇಕೆಂದು ಸಂಚಾರ ಹೊರಟ. ಹಾಗೆ ಹೋಗುತ್ತಿದ್ದಾಗ ಒಂದು ಹಳ್ಳಿ ಸಿಕ್ಕಿತು. ಅಲ್ಲಿ ಬೆಳಕೇ ಇರಲಿಲ್ಲ, ಕತ್ತಲೇ ಕತ್ತಲು ತುಂಬಿತ್ತು. ರಾಜನಿಗೆ ಬಹಳ ಬೇಸರವಾಯಿತು. ಆ ಹಳ್ಳಿಗೆ ಬೇಕಾದಷ್ಟು ದೀಪ ಮತ್ತು ಎಣ್ಣೆ ಹಂಚುವಂತೆ ಅಪ್ಪಣೆ ಮಾಡಿದ.

ಇದಾದ ಕೆಲ ಸಮಯದ ಬಳಿಕ ರಾಜ ಪುನಃ ಸಂಚಾರ ಹೊರಟ. ಆದರೆ ಆ ಹಳ್ಳಿಗೆ ಇನ್ನೂ ಬೆಳಕು ಬಂದಿರಲಿಲ್ಲ. ರಾಜನಿಗೆ ಬೇಸರವಾಗಿ ಪುನಃ ದೀಪ ಮತ್ತು ಎಣ್ಣೆ ಸರಬರಾಜು ಮಾಡುವಂತೆ ಅಪ್ಪಣೆ ಮಾಡಿದ. ಆದರೆ ರಾಜ ಮತ್ತೊಮ್ಮೆ ಹೋಗುವಾಗಲೂ ಆ ಹಳ್ಳಿಗೆ ಬೆಳಕು ಮಾತ್ರ ಬಂದಿರಲಿಲ್ಲ. ರಾಜನಿಗೆ ಕಳವಳವಾಯಿತು. ಮತ್ತೊಮ್ಮೆ ದೀಪ, ಎಣ್ಣೆ ಹಂಚುವಂತೆ ಹೇಳಿದ. ಆದರೆ ಈ ಸಾರಿಯೂ ಹಳ್ಳಿಗೆ ಬೆಳಕು ಬರಲಿಲ್ಲ.

ರಾಜನಿಗೆ ಆತಂಕವಾಯಿತು. ತನ್ನ ಹಳೆಯ, ಹಿರಿಯ ಮಂತ್ರಿಯನ್ನು ಕರೆದು ರಾಜ ಅವನಿಗೆ ಈ ಹಳ್ಳಿಯ ಸಮಸ್ಯೆಯನ್ನು ವಿವರಿಸಿದ. ಸ್ವಲ್ಪ ಹೊತ್ತು ಯೋಚಿಸಿದ ಬಳಿಕ, ಮಂತ್ರಿ ಕೇಳಿದ,

"ಮಹಾರಾಜರೇ, ದೀಪ, ಎಣ್ಣೆ ಯಾರ ಕೈ ಸೇರಿತು ?"

ರಾಜ ಚಿಂತಿಸುತ್ತಾ ಹೇಳಿದ, "ಊರಿನ ಗಂಡಸರ ಕೈಗೆ."

ಆಗ ಮಂತ್ರಿ ಹೇಳಿದ, "ಇದೇ ನೀವು ಮಾಡಿದ ತಪ್ಪು. ಅದನ್ನು ಹೆಂಗಸರ ಕೈಗೆ ಕೊಡಬೇಕಿತ್ತು."

ಅಂತೆಯೇ ಹೆಂಗಸರ ಕೈಗೆ ದೀಪ ಮತ್ತು ಎಣ್ಣೆ ಕೊಡಲಾಯಿತು. ಅಂದಿನಿಂದ ಆ ಹಳ್ಳಿಯಲ್ಲಿ ದೀಪ ಬೆಳಗುತ್ತಲೇ ಇತ್ತು. ಕತ್ತಲು ಓಡಿ ಹೋಯಿತು.



# ಏನು ತಿಳಿಯೋಣ ?

2 ವಿಷಯ : ತರಬೇತಿಯ ನಿರೀಕ್ಷೆ

**ಕನಿಷ್ಠ ಸಮಯ :**

15 ನಿಮಿಷ

**ಬೇಕಾಗುವ ಸಾಮಾಗ್ರಿ :**

ಕಪ್ಪು ಹಲಗೆ, ಸೀಮೆ ಸುಣ್ಣ ಅಥವಾ ದೊಡ್ಡ ಗಾತ್ರದ ಕಾಗದ ಮತ್ತು ಸ್ಕೆಚ್ ಪೆನ್ನುಗಳು.

**ತಯಾರಿ :**

* ಸಂಸ್ಥೆಯ ನಿರೀಕ್ಷೆಗಳನ್ನು ತಿಳಿದು, ಗುರುತು ಮಾಡಿಟ್ಟುಕೊಳ್ಳಿ.
* ಮಹಿಳೆಯರ ನಿರೀಕ್ಷೆ ಏನಿರಬಹುದೆಂಬ ಕಲ್ಪನೆ ಇರಲಿ.

**ಉದ್ದೇಶ :**

ತರಬೇತಿಯಿಂದ ಮಹಿಳೆಯರಿಗಿರುವ ನಿರೀಕ್ಷೆಯನ್ನು ತಿಳಿದುಕೊಂಡು, ಸಾಧ್ಯತೆಯನ್ನು ಅರ್ಥ ಮಾಡಿಕೊಳ್ಳುವುದು.

**ಚಟುವಟಿಕೆ :**

* ಏನು ತಿಳಿಯಬೇಕು ಎಂದು ಬಂದಿದ್ದಾರೆ, ಎಂದು ಮಹಿಳೆಯರಲ್ಲಿ ವಿಚಾರಿಸಿ ತಿಳಿದುಕೊಳ್ಳಿ.
* ಪ್ರತಿಯೊಬ್ಬರು ಹೇಳಿದ್ದನ್ನೂ ಕಪ್ಪು ಹಲಗೆಯ ಮೇಲೆ ತಪ್ಪದೆ ಬರೆದುಕೊಳ್ಳಿ.
* ಎಲ್ಲರೂ ಹೇಳಿಯಾದ ಮೇಲೆ, ಈ ಮೂರು ದಿನಗಳಲ್ಲಿ ಎಷ್ಟು, ಏನು, ತಿಳಿಯಲು ಸಾಧ್ಯ ಎಂಬುದನ್ನು ಮಹಿಳೆಯರೊಂದಿಗೆ ಚರ್ಚಿಸಿ, ತಿಳಿಸಿ.

**ಗಮನಿಸಬೇಕಾದ ಅಂಶಗಳು :**

* ಮಹಿಳೆಯರಿಗೆ ಏನು ಹೇಳಬೇಕೆಂದು ತೋಚದೇ ಹೋಗಬಹುದು, ಹೆಚ್ಚು ಬಲವಂತ ಮಾಡಬೇಡಿ. ಇಲ್ಲಿಗೆ ಯಾಕೆ ಬಂದಿದ್ದೀರಿ, ಏನು ತಿಳಿಯೋಣ ಹೀಗೇ ಸರಳವಾದ ರೀತಿಯಲ್ಲಿ ಸಹಕರಿಸಿ.
* ಈಡೇರಿಸಲಾಗದ ನಿರೀಕ್ಷೆಗಳಿಗೆ ಭರವಸೆ ಕೊಡಬೇಡಿ.
* ಮುಕ್ತವಾಗಿ ಚರ್ಚಿಸದೆ ನಿರ್ಧಾರಕ್ಕೆ ಬರಬೇಡಿ.
* ಅಂತಿಮವಾಗಿ ನಿರೀಕ್ಷೆಗಳು ಸ್ಪಷ್ಟವಾಗಿರಲಿ.
* ಕೊನೆಯಲ್ಲಿ ತರಬೇತಿಯ ಮೌಲ್ಯಮಾಪನಕ್ಕೂ ಇದು ಸಹಕಾರಿ.

**ನಿರೀಕ್ಷಿತ ಫಲಿತಾಂಶ :**

* ತರಬೇತಿದಾರರಿಗೂ, ಮಹಿಳೆಯರಿಗೂ ತರಬೇತಿಯಲ್ಲಿ ಯಾವ ಅಂಶಗಳನ್ನು ತಿಳಿದುಕೊಳ್ಳಲಾಗುತ್ತದೆ ಎಂಬುದು ಸ್ಪಷ್ಟವಾಗಬೇಕು.

**ವೈಯಕ್ತಿಕ ಟಿಪ್ಪಣಿ :**

# ಎಲ್ಲಿಗೆ ತಲುಪಬೇಕು ?

3 ವಿಷಯ : ತರಬೇತಿಯ ಉದ್ದೇಶ

**ಉದ್ದೇಶ :**

ಮಹಿಳೆಯರಲ್ಲಿ ತರಬೇತಿಯ ಒಟ್ಟು ಉದ್ದೇಶ ಸ್ಪಷ್ಟಪಡಿಸುವುದು.

**ಚಟುವಟಿಕೆ :**

ತರಬೇತಿಯ ಉದ್ದೇಶಗಳನ್ನು ಸರಳವಾಗಿ ಮನಮುಟ್ಟುವಂತೆ ವಿವರಿಸಿ.

**ಗಮನಿಸಿ :**

- ಉದ್ದೇಶಗಳಲ್ಲಿ ಗೊಂದಲವಾಗದಿರಲಿ.
- ವಿಪರೀತ ಉದ್ದ ಎಳೆಯಬೇಡಿ.
- ಎಲ್ಲರೂ ಒಪ್ಪುವಂತೆ ಇರಲಿ.
- ಪಟ್ಟಿಯಲ್ಲಿ ಇರುವ ಎಲ್ಲವನ್ನೂ ವಿವರಿಸಬೇಕಾಗಿಲ್ಲ, ಮಹಿಳೆಯರಿಗೇ ಅನ್ವಯವಾಗುವಂತೆ ಈ ತರಬೇತಿಗೇ ಸಂಬಂಧಿಸಿದ ಅಂಶಗಳನ್ನು ಮುಖ್ಯವಾಗಿ ಇಟ್ಟುಕೊಳ್ಳಿ.

**ನಿರೀಕ್ಷಿತ ಫಲಿತಾಂಶ :**

ಮಹಿಳೆಯರಿಗೆ ಉದ್ದೇಶ ಸ್ಪಷ್ಟವಾಗಬೇಕು.

**ಕನಿಷ್ಠ ಸಮಯ :**

10 ನಿಮಿಷ

**ಬೇಕಾಗುವ ಸಾಮಗ್ರಿ :**

ಉದ್ದೇಶದ ಒಂದು ಪ್ರತಿ.

**ತಯಾರಿ :**

ಮೊದಲೇ ಉದ್ದೇಶಗಳನ್ನು ತಿಳಿದು ಕೊಂಡು ಜೋಡಿಸಿಟ್ಟುಕೊಳ್ಳಬೇಕು.

---

## ಹೆಜ್ಜೆಗಳ ಮುಖ್ಯ ಉದ್ದೇಶಗಳು

**ಈ ತರಬೇತಿಯ ಅತ್ಯಂತ ಪ್ರಮುಖ ಉದ್ದೇಶ :**

"ಕಾರ್ಯಕ್ಷೇತ್ರದ ಪ್ರಕರಣಗಳನ್ನು ವಿಶ್ಲೇಷಿಸುತ್ತಾ,
ಲಿಂಗತ್ವದ ಪರಿಕಲ್ಪನೆಗಳನ್ನು ಅರ್ಥ ಮಾಡಿ
ಕೊಳ್ಳುವುದು ಹೊಸ ಆಲೋಚನೆ ಬೆಳೆಸುವುದು"

- ಮಹಿಳೆಯರ ಜ್ಞಾನವನ್ನು ಮಹಿಳೆಯರ ಕಲಿಕೆಗಾಗಿ ಉಪಯೋಗಿಸುವುದು.
- ಮಹಿಳಾ ಸಮಖ್ಯಾದ ಕಾರ್ಯಕ್ಷೇತ್ರದ ಪ್ರಕ್ರಿಯೆಯನ್ನು, ವಿಶಾಲವಾಗಿ ಪಸರಿಸುವುದಕ್ಕಾಗಿ ದಾಖಲಿಸುವುದು.
- ಸಮಖ್ಯಾದ ಬಳಕೆಗಾಗಿ ತರಬೇತಿ / ಸಂಪನ್ಮೂಲ ಸಾಮಗ್ರಿಗಳನ್ನು ತಯಾರಿಸುವುದು.
- ಲಿಂಗತ್ವದ ಸಿದ್ಧಾಂತ ಮತ್ತು ಅಳವಡಿಕೆಗೆ ಕಾರ್ಯ ಚೌಕಟ್ಟುಗಳನ್ನು ತಯಾರಿಸುವುದು.
- ಲಿಂಗತ್ವ ತರಬೇತಿಯನ್ನು ಮಾಡಬಲ್ಲ ಒಂದು ಬಳಗವನ್ನು ಸಮಖ್ಯಾದೊಳಗೆ ಬೆಳೆಸುವುದು.
- ಪ್ರಸ್ತುತ ಇರುವ ಲಿಂಗತ್ವದ ಕಾರ್ಯತಂತ್ರಗಳನ್ನು ಗುರುತಿಸುವುದು, ಹೊಸತನ್ನು ಹುಟ್ಟು ಹಾಕುವುದು.
- ಮಹಿಳಾ ದೃಷ್ಟಿಕೋನದಿಂದ ಪರಿಕಲ್ಪನೆಗಳನ್ನು ಹೊಸತಾಗಿ ಬೆಳೆಸಿಕೊಳ್ಳುವುದು.

# ಹೆಸರು ಏನ್ರೀ ?

4 ವಿಷಯ : ಪರಿಚಯ

ಕನಿಷ್ಠ ಸಮಯ :

30 ನಿಮಿಷ

ಉದ್ದೇಶ :

* ಪರಸ್ಪರ ಪರಿಚಯ.
* ಮಹಿಳೆಯರಿಗೆ ತಮ್ಮ ಹೆಸರಿನ ಮೇಲೆ ಕೂಡಾ ಹಕ್ಕಿಲ್ಲದೆ ಇರುವುದನ್ನು ಅರ್ಥ ಮಾಡಿಕೊಳ್ಳುವುದು.

ಚಟುವಟಿಕೆ :

* ಪ್ರತಿಯೊಬ್ಬರೂ ತಮ್ಮ ಹೆಸರು, ಊರು ಹೇಳಲಿ.
* ಅದರೊಂದಿಗೇ, ಹೆಸರಿನ ಅರ್ಥ, ಹೇಗೆ ಬಂತು, ತಮ್ಮ ಹೆಸರಿನ ಬಗ್ಗೆ ಪ್ರೀತಿ ಇದೆಯೇ ಬದಲಾವಣೆ ಆಗಿದೆಯೇ, ಆಗಿದ್ದರೆ ಏನನಿಸುತ್ತದೆ, ಆಗಿಲ್ಲದೇ ಹೋದರೆ ಯಾರಾದರೂ ಬದಲಾಯಿಸಿದರೆ ಏನು ಅನ್ನಿಸಬಹುದು ಎಂದು ವಿವರಿಸಲಿ.
* ನೀವೂ ಹಂಚಿಕೊಳ್ಳಿ.
* ಕೊನೆಯಲ್ಲಿ ಮದುವೆ ಸಮಯದಲ್ಲಿ ಗಂಡಿನ ಕಡೆಯವರ ಇಷ್ಟ ಪ್ರಕಾರ ಹೆಸರು ಬದಲಾಯಿಸುವುದು, ಈ ರೀತಿ ಗಂಡಸರ ಹೆಸರು ಬದಲಾಯಿಸದಿರುವುದು ಯಾಕೆ ಎಂಬ ಇತ್ಯಾದಿ ಅಂಶಗಳನ್ನು ಚರ್ಚಿಸಿ.

ಗಮನಿಸಿ :

* ತೀರಾ ಉದ್ದ ಎಳೆಯಬೇಡಿ.
* ಪ್ರತಿಯೊಬ್ಬರಿಗೆ ಒಂದೆರಡು ನಿಮಿಷಗಳು ಸಾಕು.
* ಮದುವೆಯಾದಾಗ ಹೆಸರು ಬದಲಾಯಿಸುವಂತಹ ಕ್ರಮ ಎಲ್ಲಾ ಪ್ರದೇಶದಲ್ಲಿ ಒಂದೇ ತರಹ ಇರಲಾರದು. ಕೆಲವು ಕಡೆ ಕಟುಂಬದ ಅಥವಾ ಊರಿನ ಹೆಸರು ಬದಲಾಗಬಹುದು. ಯಾವುದೇ ಇರಲಿ ನಿರೀಕ್ಷಿತ ಫಲಿತಾಂಶದ ಕಡೆ ಸ್ಪಷ್ಟವಾದ ಗಮನವಿರಲಿ.

ನಿರೀಕ್ಷಿತ ಫಲಿತಾಂಶ :

* ಹೆಸರಲ್ಲೇನಿದೆ ಎಂಬ ಯೋಚನೆಯಿಂದ, ಹೆಸರಿನ ಮೇಲೆ ಕೂಡಾ ಹಕ್ಕು ಇಲ್ಲದಿರುವ ವಿಚಾರ ಅರ್ಥವಾಗಬೇಕು.

ವೈಯಕ್ತಿಕ ಟಿಪ್ಪಣಿ :

# ಹೆಣ್ಣಾಗಿ ಹುಟ್ಟಿದ್ದಕ್ಕಾ...

5 ವಿಷಯ : ಮಹಿಳೆಯಾಗಿ ಇರುವುದರ ಬಗ್ಗೆ ಅನಿಸಿಕೆ



**ಕನಿಷ್ಠ ಸಮಯ :**
30 ನಿಮಿಷ

**ಉದ್ದೇಶ :**

* ಮಹಿಳೆಯರಿಗೆ ತಮ್ಮ ಜನುಮದ ಬಗ್ಗೆ ಎಷ್ಟು ಅಭಿಮಾನವಿದೆ, ಅಥವಾ ಕೊರಗು ಇದೆ ಎಂಬುದರ ಪರಿಚಯ.

**ಚಟುವಟಿಕೆ :**

* ತಾವು ಹೆಣ್ಣಾಗಿ ಹುಟ್ಟಿರುವ ಬಗ್ಗೆ ಯಾವ ಭಾವನೆಯಿದೆ, ಬೇಸರವೇ, ಸಂತೋಷವೇ, ಯಾಕೆ ಎಂಬುದನ್ನು ಪ್ರತಿಯೊಬ್ಬರೂ ಒಂದೆರಡು ವಾಕ್ಯಗಳಲ್ಲಿ ಹೇಳಲಿ.
* ಕೊನೆಯಲ್ಲಿ ನೀವೂ ಹೇಳಿ ಮತ್ತು ಎಲ್ಲರ ಭಾವನೆಗಳನ್ನು ಕ್ರೋಢೀಕರಿಸಿ ಹೇಳಿ.
* ಸಂತೋಷ, ಅಭಿಮಾನವೇ ಹೆಚ್ಚು ಇದ್ದರೆ (ಹೀಗಿರುವುದು ಕಡಿಮೆ) ಗುಂಪನ್ನು ಅಭಿನಂದಿಸಿ. ಆದರೆ ಸಮಾಜದಲ್ಲಿ ಎಲ್ಲರ ಪರಿಸ್ಥಿತಿ ಹೀಗೆ ಇಲ್ಲ ಎಂಬುದನ್ನು ವಿವರಿಸಿ.
* ಮಿಶ್ರ ಭಾವನೆ ಇದ್ದರೆ (ಹೆಚ್ಚಾಗಿ ಹೀಗೆ ಇರುತ್ತದೆ) ನಾವು ಹೆಚ್ಚು ಅಭಿಮಾನ ಪಡುವಂತೆ ನಮ್ಮ ಶಕ್ತಿಯನ್ನು ನಾವು ತಿಳಿದುಕೊಳ್ಳಬೇಕೆಂಬ ಆಶಯ ಹುಟ್ಟಿಸಿ.
* ತೀರಾ ಕೊರಗು, ಕೀಳರಿಮೆ ಇದ್ದರೆ ಇದನ್ನು ಹೋಗಲಾಡಿಸುವತ್ತ ಕೆಲಸ ಮಾಡೋಣವೆಂಬ ಭರವಸೆ ಹುಟ್ಟಿಸಿ.

**ಗಮನಿಸಿ :**

* ಪ್ರತಿಯೊಬ್ಬರೂ 1 - 2 ನಿಮಿಷಕ್ಕಿಂತ ಹೆಚ್ಚು ತೆಗೆದುಕೊಳ್ಳದಂತೆ ನೋಡಿಕೊಳ್ಳಿ.
* ಅಳು ಬರುವಷ್ಟು ವಿವರಣೆ ಕೊಡದಂತೆ, ನಿಗಾವಹಿಸಿ. ಇದು ಮೊದಲ ಹಂತವಾದುದರಿಂದ ಮುಂದುವರಿಸಲು ಕಷ್ಟವಾಗಬಹುದು.

**ನಿರೀಕ್ಷಿತ ಫಲಿತಾಂಶ :**

* ನಾವು ಮಹಿಳೆಯರು ಎಂದು ಅಭಿಮಾನ ಪಡಬೇಕು ಎಂಬ ಹೊಸ ಆಲೋಚನೆ ಹುಟ್ಟುವುದು.
* ಮಹಿಳೆಯಾಗಿರುವುದಕ್ಕೆ ಅನುಭವಿಸಬೇಕಾಗಿ ಬಂದ ಕೊರಗನ್ನು ನಿವಾರಿಸುವತ್ತ ಕೆಲಸ ಮಾಡಬೇಕೆಂಬ ಆಶಯ ಹುಟ್ಟಿಸುವುದು.

**ವೈಯಕ್ತಿಕ ಟಿಪ್ಪಣಿ :**

# ಚೌಕಟ್ಟಿನ ಒಳಗೋ ಹೊರಗೋ... (ಹಂತ 1)

6 ವಿಷಯ : ಮಹಿಳೆಯ ಮೇಲಿನ ನಿಯಂತ್ರಣ

**ಕನಿಷ್ಠ ಸಮಯ :**

ಮೊದಲ ಹಂತ 45 ನಿಮಿಷ

**ಬೇಕಾದ ಸಾಮಾನು :**

ಚೌಕಟ್ಟಿನ ಚಿತ್ರ ಹಾಕಿರುವಂತಹ ಬಿಳಿ ಹಾಳೆಗಳು ಪ್ರತಿಯೊಬ್ಬರಿಗೆ 3 - 4 ಸ್ಕೆಚ್‌ಪೆನ್ನುಗಳು.

**ತಯಾರಿ :**

* ಚಟುವಟಿಕೆಗೆ ಮುಂಚಿತವಾಗಿಯೇ, ಪ್ರತಿ ಹಾಳೆಯಲ್ಲಿ ಚೌಕಗಳನ್ನು ಹಾಕಬೇಕು. ಬೇರೆ ಬೇರೆ ಹಾಳೆಯಲ್ಲಿ ಚೌಕದ ಅಳತೆ ಬೇರೆ ಬೇರೆ ಇರಲಿ.
* ಮಹಿಳೆಯ ಬದುಕಿನಲ್ಲಿ ಬರಬಹುದಾದ ಕಟ್ಟು ಪಾಡುಗಳ ಒಂದು ಪಟ್ಟಿ ಮಾಡಿ ಇಟ್ಟುಕೊಳ್ಳಿ

**ಉದ್ದೇಶ :**

ಮಹಿಳೆಯರ ಬದುಕಿನ ಮೇಲಿನ ಬೇರೆ ಬೇರೆ ರೀತಿಯ ಚೌಕಟ್ಟುಗಳನ್ನು (ನಿಯಂತ್ರಣವನ್ನು) ಗಮನಿಸುತ್ತಾ, ಅವರ ಬೆಳವಣಿಗೆಯ ಮೇಲೆ ಈ ಚೌಕಟ್ಟುಗಳ ಪರಿಣಾಮವನ್ನು ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* ಚೌಕಟ್ಟು ಒಂದನ್ನು ಹಾಕಿದಂತಹ ಬಿಳಿಹಾಳೆಯನ್ನು ಪ್ರತಿಯೊಬ್ಬರಿಗೂ ಕೊಟ್ಟು ಅವರಿಗೆ ಮನಸ್ಸಿಗೆ ಬಂದಂತಹ ಚಿತ್ರವನ್ನು ಅದರ ಮೇಲೆ ಬಿಡಿಸಲು ಹೇಳಿ. (15 ನಿ.)
* ಒಮ್ಮೆ ಹಾಳೆ ಕೊಟ್ಟ ಮೇಲೆ ಯಾವುದೇ ಮಾತುಕತೆಗೆ ಅವಕಾಶವಿಲ್ಲ ಎಂಬುದನ್ನು ಮುಂಚಿತವಾಗಿಯೇ ಸ್ಪಷ್ಟವಾಗಿ ಹೇಳಿ.
* ಬಿಡಿಸಿಯಾದ ಮೇಲೆ ಎಲ್ಲರ ಚಿತ್ರ ಹರವಿ ಇಡಿ ಅಥವಾ ಗೋಡೆಯ ಮೇಲೆ ಅಂಟಿಸಿ ಇಡಿ. ಎಲ್ಲರೂ ಚಿತ್ರವನ್ನು ಗಮನವಿಟ್ಟು ನೋಡಲಿ.
* ಚಿತ್ರಗಳ ಬಗ್ಗೆ ಏನು ಅನ್ನಿಸಿತು ಎಂಬುದನ್ನು ಹಂಚಿಕೊಳ್ಳುವಂತೆ ಹೇಳಿ. ಸ್ವಲ್ಪ ಹೊತ್ತು ಹೇಳಲಿ. ಚೌಕಟ್ಟುಗಳನ್ನು ಬೇರೆ ಬೇರೆಯವರು ಹೇಗೆ ಉಪಯೋಗಿಸಿದರು ಎಂಬುದನ್ನು ಹಂಚಿಕೊಳ್ಳುವಂತೆ ಹೇಳಿ.

ಇದಾದ ಮೇಲೆ ಮಹಿಳೆಯರು ತಾವಾಗಿಯೇ ಜೀವನಕ್ಕೂ ಈ ಚೌಕಟ್ಟುಗಳನ್ನು ಹೋಲಿಸಿ ನೋಡುತ್ತಾರೋ ಎಂದು ಗಮನಿಸಿ. ಇಲ್ಲವಾದರೆ ನೀವೇ ಹೋಲಿಸಿ ಮಾತಾಡುವಂತೆ ಸೂಚನೆ ಕೊಡಿ.

ಯಾವ ರೀತಿಯಲ್ಲಿ ಹುಟ್ಟಿನಿಂದ ಮಹಿಳೆಯರ ಬದುಕಿನ ಮೇಲೆ ಶಿಕ್ಷಣಕ್ಕೆ, ಆರೋಗ್ಯಕ್ಕೆ, ಮದುವೆಗೆ, ಇರಬೇಕಾದ ರೀತಿ ನೀತಿ ಬಗ್ಗೆ ಚೌಕಟ್ಟುಗಳು (ಕಟ್ಟುಪಾಡುಗಳು) ಇವೆ ಎಂಬುದನ್ನು ಚರ್ಚಿಸುತ್ತಾ ವಿಶ್ಲೇಷಣೆ ಮಾಡಿ. ಈ ಚೌಕಟ್ಟುಗಳು ಎಲ್ಲಿಂದ ಬರುತ್ತವೆ, ಯಾವ ಯಾವ ರೂಪದಲ್ಲಿರುತ್ತವೆ, ಹೇಗೆ ನಾವು ಒಪ್ಪಿಕೊಳ್ಳುತ್ತೇವೆ ಎಂಬುದನ್ನು ವಿಶ್ಲೇಷಣೆ ಮಾಡಿ. ಚೌಕಟ್ಟು ಮೀರುವುದು ಹೇಗೆ ಏನು ಎಂಬುದರ ಬಗ್ಗೆ ಮಾತಾಡಿ.

**ಗಮನಿಸಿ :**

* ಈ ಚಟುವಟಿಕೆ ಸರಿಯಾಗಿ ನಡೆದರೆ, ತರಬೇತಿದಾರರು ಹೆಚ್ಚು ಮಾತಾಡದೆಯೇ, ಆಳವಾದ ವಿಶ್ಲೇಷಣೆಗಳು ಮಹಿಳೆಯರಿಂದಲೇ ಬರಬಹುದು.
* ಅದಕ್ಕಾಗಿ ಬಹಳ ಎಚ್ಚರಿಕೆಯಿಂದ ಸೂಚನೆಗಳನ್ನು ಕೊಡುತ್ತಿರಬೇಕು.
* ಚಿತ್ರಗಳಲ್ಲೇ ಚೌಕಟ್ಟುಗಳ ವಿಚಾರ ಕಣ್ಣಿಗೆ ಕಟ್ಟಿದಂತೆ ಕಾಣುವುದರಿಂದ ಈ ವಿಚಾರದತ್ತ ತೆಗೆದುಕೊಂಡು ಹೋಗುವುದು ಸುಲಭವಾಗುತ್ತದೆ.

**ನಿರೀಕ್ಷಿತ ಫಲಿತಾಂಶ :**

* ಮಹಿಳೆಯರು ತಮ್ಮ ಬದುಕಿನ ಚೌಕಟ್ಟುಗಳನ್ನು ಗುರುತಿಸುವುದು.
* ಅವುಗಳ ಮೂಲವನ್ನು ಹುಡುಕಲು ತೊಡಗುವುದು.
* ಸ್ವಂತ ಬೆಳವಣಿಗೆಗೆ ಅವು ಹೇಗೆ ಅಡ್ಡಿ ಮಾಡುತ್ತವೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು.
* ಇದು ನ್ಯಾಯ ಅಲ್ಲ, ಇದನ್ನು ಮುರಿಯಬೇಕು, ಎಂಬ ಆಲೋಚನೆಯತ್ತ ತೊಡಗುವುದು.

# ಚೌಕಟ್ಟಿನ ಒಳಗೋ ಹೊರಗೋ... (ಹಂತ 2)

6 ವಿಷಯ : ಸಂಪನ್ಮೂಲಗಳ ಮೇಲಿನ ಹಿಡಿತ



**ಉದ್ದೇಶ :**

ಚೌಕಟ್ಟುಗಳನ್ನು ಮುರಿದಾಗಿನ ಅನುಭವ, ಹಂಚಿಕೊಳ್ಳುವುದು. ಚೌಕಟ್ಟು ಮುರಿಯಲು ಬೇಕಾದ ಸಂಪನ್ಮೂಲಗಳನ್ನು ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* ಇಡೀ ಗುಂಪನ್ನು 5 - 6 ಸಣ್ಣ ಗುಂಪುಗಳನ್ನು ಮಾಡಿ.
* ಅಲ್ಲಿ ಅವರು ಪ್ರತಿಯೊಬ್ಬರೂ ತಮ್ಮ ಬದುಕಿನಲ್ಲಿ ಅನುಭವಿಸಿರುವ ಕಟ್ಟುಪಾಡುಗಳ ಮತ್ತು ಕಟ್ಟುಪಾಡನ್ನು ಮುರಿದ ಒಂದು ಸನ್ನಿವೇಶವನ್ನು ಹಂಚಿಕೊಳ್ಳಲಿ. ಗುಂಪಿನಲ್ಲಿ ಯಾರಾದರೂ ಒಬ್ಬರು ಈ ಕಟ್ಟುಪಾಡುಗಳನ್ನು ಮುರಿಯಲು ಸಹಾಯ ಆದಂತಹ ಅಂಶಗಳನ್ನು ಟಿಪ್ಪಣಿ ಮಾಡಿಕೊಳ್ಳಲಿ. (30 ನಿಮಿಷ)
* ದೊಡ್ಡ ಗುಂಪಿನಲ್ಲಿ ಚೌಕಟ್ಟನ್ನು ಮೀರಲು ಸಹಾಯ ಆದಂತಹ ಅಂಶಗಳನ್ನು ಮಾತ್ರವೇ ಹಂಚಿಕೊಳ್ಳಲಿ. ಇವು ಶಿಕ್ಷಣ, ಮಾಹಿತಿ, ಧೈರ್ಯ, ಸಹಕಾರ, ಅವಕಾಶ, ಚಲನಶೀಲತೆ, ಹಣ, ನೀರು, ನೆಲ... ಹೀಗೇ ಏನೇನೋ ಬರಬಹುದು.
* ಎಲ್ಲವನ್ನೂ ನೀವು ಕ್ರೋಢೀಕರಿಸಿ. ಈ ಎಲ್ಲಾ ಸಂಪತ್ತುಗಳು ಎಷ್ಟು ಮುಖ್ಯ ಎಂಬುದನ್ನು ವಿವರಿಸಿ. ಈ ಸಂಪನ್ಮೂಲಗಳ ಮೇಲೆ ನಮಗೆ ಹಿಡಿತ/ಅಧಿಕಾರ ಸಿಕ್ಕಿದರೆ ನಮಗೆ ಶಕ್ತಿ ಬರುತ್ತದೆ ಎಂಬ ವಿಚಾರವನ್ನು ಪರಿಚಯ ಮಾಡಿಸಿ.

**ಗಮನಿಸಬೇಕಾದ ಅಂಶ :**

* ಮುಖ್ಯವಾದ ಪರಿಕಲ್ಪನೆಯನ್ನು ಸರಳವಾಗಿ ಪರಿಚಯಿಸುವುದು ಅಗತ್ಯ. ಗೊಂದಲವಾಗದಂತೆ ನೋಡಿಕೊಳ್ಳಿ.

**ನಿರೀಕ್ಷಿತ ಫಲಿತಾಂಶ :**

* ವಸ್ತುರೂಪದ, ಆರ್ಥಿಕ, ದೈಹಿಕ, ಜ್ಞಾನದ (ಬೌದ್ಧಿಕ) ಸಂಪನ್ಮೂಲಗಳಿವೆ ಎಂಬುದು ಪರಿಚಯವಾಗಬೇಕು. ಈ ಶಬ್ದಗಳು ಪರಿಚಯವಾಗಬೇಕಿಲ್ಲ, ಅವರ ಅನುಭವದಲ್ಲೇ ಕಂಡು ಬಂದ ಅಂಶಗಳೇ ಸಂಪನ್ಮೂಲಗಳು ಎಂದು ಅರ್ಥವಾಗುವುದು ಮುಖ್ಯ.

**ವೈಯಕ್ತಿಕ ಟಿಪ್ಪಣಿ :**

**ಕನಿಷ್ಠ ಸಮಯ :**

1 ಗಂಟೆ

**ಬೇಕಾದ ಸಾಮಗ್ರಿ :**

ಬಿಳಿಹಾಳೆ, ಪೆನ್ನು.

**ತಯಾರಿ :**

ಸಂಪನ್ಮೂಲಗಳ ಪಟ್ಟಿ, ವಿವರ ಮಾಡಿ ಇಟ್ಟು ಕೊಳ್ಳುವುದು.

# ಹೆಸರು ಮರೆತಾಕೆ...

7 ವಿಷಯ : ತನ್ನತನ (ಹೆಣ್ತನ), ಸ್ವಂತ ವ್ಯಕ್ತಿತ್ವದ ನಾಶ ಮತ್ತು ಹುಡುಕಾಟ

**ಕನಿಷ್ಠ ಸಮಯ :**

30 ನಿ.

**ತಯಾರಿ :**

ಹೆಸರು ಮರೆತಾಕೆ - ಕಥೆಯನ್ನು ನಾಟಕ ರೂಪದಲ್ಲಿ ತಯಾರಿಸಿಡುವುದು.

**ಅಡಕ :**

'ಹೆಸರು ಮರೆತಾಕೆ' ಪುಟ - 17

**ಉದ್ದೇಶ :**

* ದೈನಂದಿನ ಬದುಕಿನಲ್ಲಿ ತಾಯಿ-ಹೆಂಡತಿಯ ಪಾತ್ರವಹಿಸುತ್ತಾ ತನ್ನದಾದ ಒಂದು ವ್ಯಕ್ತಿತ್ವವನ್ನೇ ಮಹಿಳೆಯರು ಮರೆಯುವುದನ್ನು ಅರ್ಥ ಮಾಡಿಕೊಳ್ಳುವುದು.
* ಹೊಸ ಹುಡುಕಾಟದ ಆಶಯ ತೆರೆದುಕೊಳ್ಳುವುದು.

**ಚಟುವಟಿಕೆ :**

* 'ಹೆಸರು ಮರೆತಾಕೆ' ನಾಟಕವನ್ನು ಮೊದಲೇ ತಯಾರಿಸಿಟ್ಟಿರಿ. ನೀವೇ ಮಾಡಬಹುದು. ಇಲ್ಲವೇ ಮಹಿಳೆಯರೇ ಮಾಡುವಂತೆ ತರಬೇತಿಗೆ ಮುಂಚಿತವಾಗಿ ತಯಾರು ಮಾಡಿಸಿ.
* ನಾಟಕದ ಪ್ರದರ್ಶನ ನಡೆಯಲಿ.
* ನಾಟಕದಲ್ಲಿ ಬಂದ ಅಂಶಗಳನ್ನು ಎತ್ತಿಕೊಂಡು ಚರ್ಚೆ ಮಾಡಿ. ಹೆಸರು ಮರೆಯುವುದು ಅಂದರೇನು, ಎಂಬುದರ ಕಡೆಗೆ ಹೆಚ್ಚು ಗಮನವಿರಲಿ.

**ಗಮನಿಸಿ :**

* ನಾಟಕ ಯಾರೇ ಮಾಡಲಿ, ತರಬೇತಿಗೆ ಮುಂಚೆ ತರಬೇತಿದಾರರು ನಾಟಕವನ್ನು ಒಮ್ಮೆ ನೋಡಬೇಕು. ಕೆಲವೊಮ್ಮೆ ಮೂಲ ವಿಷಯವೇ ತಪ್ಪಿಹೋಗಿ ಆಭಾಸ ವಾಗಬಹುದು.

**ನಿರೀಕ್ಷಿತ ಫಲಿತಾಂಶ :**

* ಮಹಿಳೆಯರು ಸುಲಭವಾಗಿ ನಾಟಕದೊಂದಿಗೆ ತಮ್ಮನ್ನು ತಾವು ಗುರುತಿಸಿಕೊಳ್ಳುವಂತೆ ಆಗಬೇಕು ಅಂದರೆ ಇದು 'ನಮ್ಮದೇ ಕತೆ' ಎಂದು ಅರ್ಥವಾಗಬೇಕು.
* ಹೆಸರು ಮರೆಯುವುದು ಎಂದರೆ ತನ್ನ ಸ್ವಂತಿಕೆಯನ್ನು ಮರೆಯುವುದು ಎಂಬುದೂ ಅರ್ಥವಾಗಬೇಕು.

**ವೈಯಕ್ತಿಕ ಟಿಪ್ಪಣಿ :**

# ಹೆಸರು ಮರೆತಾಕೆ...

ಒಂದು ಊರಿನಲ್ಲಿ ಒಬ್ಬಳು ಮಹಿಳೆ ಇರುತ್ತಾಳೆ. ಎಲ್ಲರಂತೆ ಹುಟ್ಟಿ ಎಲ್ಲರಂತೆ ಬೆಳೆದಿರುತ್ತಾಳೆ. ಅವಳಿಗೆ ಮದುವೆಯಾಗುತ್ತದೆ. ಮಕ್ಕಳೂ ಹುಟ್ಟುತ್ತಾರೆ. ಹೇಳಿಕೊಳ್ಳುವಂತಹಾ ಕಷ್ಟಗಳೇನೂ ಇರುವುದಿಲ್ಲ. ಮನೆಕೆಲಸ, ಮಕ್ಕಳ ಕೆಲಸ ಅಂತ ದಿನ ಕಳೆಯುತ್ತಿರುತ್ತದೆ.

ಒಂದು ದಿನ, ಅವಳು ತನ್ನ ಪಾಡಿಗೆ ಕೆಲಸ ಮಾಡುತ್ತಿದ್ದಾಗ ಅವಳಿಗೆ ತನ್ನ ಹೆಸರೇ ಮರೆತು ಹೋಗುತ್ತದೆ. ಅವಳಿಗೆ ಬಹಳ ದಿಗಿಲಾಗುತ್ತದೆ. ಏನು ಮಾಡುವುದೆಂದು ತೋಚುವುದಿಲ್ಲ. ಕೊನೆಗೆ, ಮಕ್ಕಳು ಬಂದರೆ ಹೇಳಬಹುದು ಎಂದು ಅವರಿಗಾಗಿ ಕಾಯುತ್ತಾಳೆ. ಮಕ್ಕಳು ಶಾಲೆಯಿಂದ ಬಂದ ತಕ್ಷಣ, ತನ್ನ ಹೆಸರೇನೆಂದು ಕೇಳುತ್ತಾಳೆ. ಮಕ್ಕಳು ಆಶ್ಚರ್ಯದಿಂದ ಅವಳ ಕಡೆ ನೋಡಿ "ಅಮ್ಮ" ಎಂದು ಹೇಳುತ್ತಾರೆ. ಆಟಕ್ಕೆ ಓಡುತ್ತಾರೆ.

ಈಕೆ ಗಂಡ ಬಂದರೆ ಹೇಳಬಹುದೆಂದು, ಅವನಿಗಾಗಿ ಕಾಯುತ್ತಾಳೆ. ಗಂಡ, "ನಿನ್ನ ಹೆಸರು ಕಟ್ಟಿಕೊಂಡು ಏನಾಗ ಬೇಕಾಗಿದೆ. ನೀನು ನನ್ನ ಚಿನ್ನ. ಕಾಫಿ ಮಾಡಿಕೊಡು" ಅನ್ನುತ್ತಾನೆ. ಆಕೆಗೆ ತುಂಬಾ ನೋವಾಗುತ್ತದೆ.

ಮರುದಿನ ಈಕೆ ತನ್ನ ಕೆಲಸ ಮುಗಿಸಿ ಗೆಳತಿ ಮನೆಗೆ ಹೋಗುತ್ತಾಳೆ. ಬಾಗಿಲು ತಟ್ಟುತ್ತಾಳೆ. ಬಾಗಿಲು ತೆಗೆದ ಗೆಳತಿ, "ಓಹೋ ಶಾರದಾ ಹೇಗಿದ್ದೀ ಬಾ" ಎಂದು ಕರೆಯುತ್ತಾಳೆ.

ಶಾರದಾಳಿಗೆ ಸಂತೋಷವಾಗುತ್ತದೆ. ಹೆಸರು ಸಿಕ್ಕಿತಲ್ಲಾ ಎಂದು ಖುಶಿ ಪಡುತ್ತಾಳೆ.

(ತೆಲುಗು ಮೂಲದ ಕಥೆ)



# ಸ್ತ್ರೀಯ ಪತ್ರ

8 ವಿಷಯ : ಮಹಿಳಾ ಶೋಷಣೆ

**ಕನಿಷ್ಠ ಸಮಯ :**

1 ಗಂಟೆ

**ತಯಾರಿ :**

ಪತ್ರವನ್ನು ನೀವು ಮೊದಲೇ ಒಂದೆರಡು ಬಾರಿ ಗಟ್ಟಿಯಾಗಿ, ನಿಧಾನವಾಗಿ ಓದಿ. ಅಭ್ಯಾಸ ಮಾಡಿ.

**ಉದ್ದೇಶ :**

* ಮಹಿಳಾ ಶೋಷಣೆಯ ಎರಡು ಮುಖ್ಯ ಆಯಾಮಗಳನ್ನು ಅರ್ಥಮಾಡಿಕೊಳ್ಳುವುದು.
* ಕುಟುಂಬದೊಳಗಿನ ನೇರ ಹಿಂಸೆಯನ್ನು ಮತ್ತು ಕಣ್ಣಿಗೆ ಕಾಣದ ಹಿಂಸೆಯನ್ನು ಅರ್ಥ ಮಾಡಿಕೊಳ್ಳುವುದು.

**ಚಟುವಟಿಕೆ :**

* ಸ್ತ್ರೀಯ ಪತ್ರವನ್ನು, ಹೆಂಡತಿಯೊಬ್ಬಳು ಗಂಡನಿಗೆ ಬರೆದ ಪತ್ರ ಎಂದು ಓದಿ ವಿವರಿಸಿ.
* ಪತ್ರದಲ್ಲಿ ಅವರು ಗಮನಿಸಿದ ಅಂಶಗಳನ್ನು ಹಂಚಿಕೊಳ್ಳುವಂತೆ ಹೇಳಿ. ಆ ವಿಚಾರಗಳನ್ನು ಚರ್ಚಿಸಿ. ಎರಡು ರೀತಿಯ ಹಿಂಸೆಗಳು ಯಾವುವು ಎಂಬುದನ್ನು ಗುರುತಿಸಿ ವಿಶ್ಲೇಷಣೆ ಮಾಡಿ. ಪತ್ರ ಬರೆದ ಮಹಿಳೆಗೆ, ಮನೆಬಿಡುವಂತಹಾ ಕಷ್ಟ ಏನು ಬಂದಿತ್ತು ಎಂಬುದನ್ನು ವಿಶ್ಲೇಷಣೆ ಮಾಡಿ.

**ಗಮನಿಸಬೇಕಾದ ಅಂಶ :**

* ಪತ್ರವನ್ನು ತಡವರಿಸದೆ ಓದಿ. ಮಹಿಳೆಯರಿಗೆ ಅರ್ಥವಾಗುವಂತೆ ಸ್ಪಷ್ಟವಾಗಿ ಓದಿ ಹೇಳಿ.
* ಪತ್ರ ಬರೆದಾಕೆಯ ಮನಃಸ್ಥಿತಿಯನ್ನು ನೀವು ಸರಿಯಾಗಿ ಅರ್ಥಮಾಡಿಕೊಳ್ಳಿ. "ಅವಳಿಗೆ ಸೊಕ್ಕು" ಎಂಬ ಅರ್ಥ ಬರದಿರುವ ಹಾಗೆ ಎಚ್ಚರಿಕೆ ವಹಿಸಿ.

**ನಿರೀಕ್ಷಿತ ಫಲಿತಾಂಶ :**

* ಪರಿಸ್ಥಿತಿಯಲ್ಲಿ - (ಅಂದರೆ ಊಟ-ವಸತಿ-ಬಟ್ಟೆ-ಬರೆಗೆ) ತೊಂದರೆ ಇಲ್ಲದೇ ಹೋದರೂ, ಹೊಡೆತ - ಬಡೆತವಿಲ್ಲದೇ ಹೋದರೂ - ಮಹಿಳೆಯರಿಗೆ ಸ್ಥಾನಮಾನದ ಕೊರತೆ ಇದೆ ಎಂಬುದು ಅರ್ಥವಾಗಬೇಕು.

**ವೈಯಕ್ತಿಕ ಟಿಪ್ಪಣಿ :**

# ಸ್ತ್ರೀಯ ಪತ್ರ

ರವೀಂದ್ರನಾಥ ಠಾಗೋರ್
ಅನು : ವಾಣಿ ಪೆರಿಯೋಡಿ

ಪೂಜ್ಯರೇ,

ಇಂದಿಗೆ ಹದಿನೈದು ವರುಷಗಳಾದುವು ನಮ್ಮ ಮದುವೆಯಾಗಿ. ಅಂದಿನಿಂದ ನಾವು ಒಟ್ಟಿಗೇ ಇದ್ದೆವು. ಇಲ್ಲಿಯವರೆಗೆ ನಿಮಗೆ ಪತ್ರ ಬರೆಯುವ ಅವಕಾಶವೇ ನನಗೆ ಸಿಗಲಿಲ್ಲ, ನಿಮ್ಮ ಮನೆಯ ಮಧ್ಯಮ ಸೊಸೆ ಜಗನ್ನಾಥಪುರಿಗೆ ತೀರ್ಥಯಾತ್ರೆಗಾಗಿ ಬಂದಿದ್ದೇನೆ.

ಬಂದುದರಿಂದ, ನನಗೆ ಈ ಪ್ರಪಂಚ ಮತ್ತು ದೇವರೊಂದಿಗೆ ಬೇರೊಂದು ಸಂಬಂಧವಿದೆಯೆಂಬುದು ಅರಿವಾಯಿತು. ಅದಕ್ಕಾಗಿ ಈವತ್ತು ಪತ್ರ ಬರೆಯುವ ಸಾಹಸ ಮಾಡುತ್ತಿದ್ದೇನೆ. ಇದನ್ನು ಬರೀ ಮಧ್ಯಮ ಸೊಸೆಯ ಪತ್ರವೆಂದು ಮಾತ್ರ ತಿಳಿದುಕೊಳ್ಳಬೇಡಿ.

ನೀವು ನನ್ನನ್ನು ನೋಡಲು ಬಂದ ಆದಿನ ನನಗೆ ನೆನಪಾಗ್ತಾ ಇದೆ. ನನಗೆ ಹನ್ನೆರಡನೇ ವರುಷ ಹಿಡಿದಿತ್ತು, ದೂರದ ಹಳ್ಳಿಯಲ್ಲಿ ನಮ್ಮ ಮನೆಯಿತ್ತು. ಅಲ್ಲಿಗೆ ತಲಪುವುದಕ್ಕೆ ನಿಮಗೆಲ್ಲಾ ತುಂಬಾ ಕಷ್ಟವಾಗಿತ್ತು, ನಮ್ಮ ಮನೆಯವರಿಗೆ ನಿಮ್ಮನ್ನು ಕಾದು ಕಾದು ಸಾಕಾಗಿ ಹೋಗಿತ್ತು.

ವಿದಾಯದ ನೋವಿನ ರಾಗ ಗುಂಯ್‌ಗುಟ್ಟುತ್ತು, ನಾನು ಮಧ್ಯಮ ಸೊಸೆಯಾಗಿ ನಿಮ್ಮ ಮನೆಗೆ ಬಂದೆ. ಎಲ್ಲಾ ಹೆಂಗಸರೂ ಹೊಸ ಮದುಮಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದರು. ಸೊಸೆ ಸುಂದರಿಯೆಂದು ಎಲ್ಲರೂ ಒಪ್ಪಿಕೊಳ್ಳಬೇಕಾಯಿತು.

ನಾನು ಸುಂದರಿ ಎಂಬುದಂತೂ ನೀವೆಲ್ಲಾ ಬಹಳ ಬೇಗ ಮರೆತು ಬಿಟ್ಟಿರಿ. ಆದರೆ ನಾನು ಬುದ್ಧಿವಂತೆ ಎಂಬುದನ್ನು ನಿಮಗೆ ಬೇಕೆಂದರೂ ಮರೆಯಲಾಗಲಿಲ್ಲ, ಹೆಂಗಸರಿಗೆ ಚುರುಕು ಬುದ್ಧಿಯೂ ಒಂದು ಬಲ ಎಂದು ಅಮ್ಮ ಹೇಳುತ್ತಿದ್ದರು.

ಆದರೆ ನಾನೇನು ಮಾಡಲಿ. ಕೂತರೆ ನಿಂತರೆ ನೀವೆಲ್ಲಾ "ಈ ಸೊಸೆ ಮಹಾ ಬುದ್ಧಿವಂತೆ'' ಅಂತ ಟೀಕಿಸುತ್ತಿದ್ದಿರಿ.

ಜನರು ಒಳ್ಳೆಯದು ಕೆಟ್ಟದು ಹೇಳುತ್ತಿರುತ್ತಾರೆ. ಅದನ್ನೆಲ್ಲಾ ನಾನು ಕ್ಷಮಿಸಿದ್ದೇನೆ.

ನಾನು ಕದ್ದು ಕದ್ದು ಕವನ ಬರೀತಿದ್ದೆ. ಕವಿತೆಗಳೇನೋ ಮಾಮೂಲಿಯಾಗಿದ್ದುವು. ಆದರೆ ಅದರಲ್ಲಿ ನನ್ನದೇ ಆದ ಸ್ವಂತದ ಧ್ವನಿ ಇತ್ತು, ಆ ಕವಿತೆಗಳು ನಿಮ್ಮ ನೀತಿ ನಿಯಮಗಳ ಬಂಧನಗಳಿಂದ ಮುಕ್ತವಾಗಿದ್ದುವು.

ನನ್ನ ಮುದ್ದಿನ ಮಗಳನ್ನು ಕಸಿದುಕೊಳ್ಳಲು ಸಾವು ನನ್ನ ಹತ್ತಿರವೇ ಬಂತು. ಅವಳನ್ನು ಕೊಂಡು ಹೋಯಿತು. ಆದರೆ ನನ್ನನ್ನು ಬಿಟ್ಟೇ ಹೋಯಿತು. ತಾಯಿಯಾಗುವ ನೋವನ್ನು ನಾನು ಅನುಭವಿಸಿದೆ. ಆದರೆ 'ಅಮ್ಮಾ' ಎಂದು ಕರೆಸಿಕೊಳ್ಳುವ ಸುಖ ಪಡೆಯದೇ ಹೋದೆ.

ಈ ಸಂಕಟದಿಂದ ಹೇಗೋ ಮೇಲೆ ಬಂದೆ. ದಿನನಿತ್ಯದ ಕೆಲಸಗಳಲ್ಲಿ ಮುಳುಗಿ ಹೋದೆ. ದನ-ಎಮ್ಮೆ ನೀರು-ಪಾರುಗಳಲ್ಲಿ ಮಗ್ನಳಾದೆ. ನಿಮ್ಮ ಮನೆಯ ವಾತಾವರಣ ಉಸಿರುಗಟ್ಟಿಸುವ ಹಾಗಾಗಿತ್ತು, ಆ ದನ-ಎಮ್ಮೆಗಳೇ ನನಗೆ ನನ್ನವರು ಎನಿಸುತ್ತಿತ್ತು, ಇದೇ ರೀತಿ ಬಹುಶಃ ಜೀವನ ಕಳೆದುಹೋಗುತ್ತಿತ್ತು.

ಇಂದಿನ ಈ ಪತ್ರ ಬರೆಯುವುದಕ್ಕೇ ಇರಲಿಲ್ಲ, ಆದರೆ ನನ್ನ ಈ ಗೃಹಸ್ಥ ಜೀವನದಲ್ಲಿ ಆಕಸ್ಮಿಕವಾಗಿ ಬದುಕಿನ ಬೀಜವೊಂದು ಬಂದು ಬಿತ್ತು, ಈ ಬೀಜ ಮೊಳಕೆಯೊಡೆದು ಬಲವಾಗುತ್ತಿದ್ದಂತೆ ನನ್ನ ಗೃಹಸ್ಥ ಜೀವನದ ಹಿಡಿತವೂ ಸಡಿಲವಾಗತೊಡಗಿತು. ಹಿರಿ ಸೊಸೆಯ ತಂಗಿ ಬಿಂದು, ತನ್ನ ತಾಯಿಯ ಮರಣದ ಬಳಿಕ, ನಮ್ಮ ಮನೆಗೆ ಬಂದಳು.

ನೀವೆಲ್ಲಾ ತುಂಬಾ ಚಿಂತಿತರಾಗಿರುವುದು ನನಗೆ ಕಂಡಿತು. ಹಿರಿಸೊಸೆಯ ಈ ತಂಗಿ ಸುಂದರಿಯೂ ಆಗಿರಲಿಲ್ಲ, ಸಿರಿವಂತಳೂ ಆಗಿರಲಿಲ್ಲ, ಹಿರಿಯಕ್ಕನಂತೂ ಈ ಸಮಸ್ಯೆ ಹಿಡಿದುಕೊಂಡು ಬಹಳ ಪರಿತಪಿಸುತ್ತಿದ್ದಳು. ಒಂದು ಕಡೆಯಿಂದ ತಂಗಿ ಮೇಲಿನ ಪ್ರೀತಿ, ಮತ್ತೊಂದು ಕಡೆಯಿಂದ ಅತ್ತೆ ಮನೆಯ ಅಸಮ್ಮತಿ, ವೈಮನಸ್ಸು.

ಅನಾಥ ಹುಡುಗಿಯನ್ನು ಈ ರೀತಿಯಾಗಿ ಕಡೆಗಣಿಸುವುದನ್ನು ನನ್ನಿಂದ ಸಹಿಸಿಕೊಳ್ಳುವುದಕ್ಕಾಗಲಿಲ್ಲ, ನಾನು ಬಿಂದುವನ್ನು ನನ್ನ ಹತ್ತಿರ ಮಾಡಿಕೊಂಡೆ. ಹಿರಿಯಕ್ಕನಿಗೆ ಆರಾಮವಾಯಿತು. ತಪ್ಪಿನ ಹೊರೆ ನನ್ನ ಮೇಲೆ ಬಂದು ಬಿತ್ತು.

ಮೊದಮೊದಲಿಗೆ ಬಿಂದೂಗೆ ನನ್ನ ಸ್ನೇಹ ಸಂಕೋಚ ತರುತ್ತಿತ್ತು, ಆದರೆ ಮೆಲ್ಲ ಮೆಲ್ಲನೆ ಅವಳು ನನ್ನನ್ನು ತುಂಬಾ ಪ್ರೀತಿಸತೊಡಗಿದಳು. ಅವಳು ನನಗೆ ಪ್ರೀತಿಯ ಮಹಾಸಾಗರವನ್ನೇ ಉಣಿಸತೊಡಗಿದಳು. ನನಗೆ ಇಂತಹ ಪ್ರೀತಿ, ಗೌರವ ಯಾರಾದರೂ ಕೊಡಬಲ್ಲರೆಂದು ನಾನು ಯೋಚಿಸಿಯೇ ಇರಲಿಲ್ಲ,

ಬಿಂದುಗೆ ನಾನು ಪ್ರೀತಿ-ವಾತ್ಸಲ್ಯ ತೋರಿಸುತ್ತಿದ್ದುದು ನಿಮ್ಮಿಂದ ಸಹಿಸಿಕೊಳ್ಳುವುದಕ್ಕಾಗಲಿಲ್ಲ. ಆದಿನ ನನ್ನದೊಂದು ಆಭರಣ ಕಳೆದುಹೋದುದು ನೆನಪಾಗುತ್ತಾ ಇದೆ. ಬಿಂದುವಿನ ಮೇಲೆ ಕಳ್ಳತನದ ಆರೋಪ ಹೊರಿಸಲು ನಿಮ್ಮೆಲ್ಲರಿಗೆ ಎಳ್ಳಷ್ಟೂ ಕಸಿವಿಸಿಯಾಗಲಿಲ್ಲ.

ಒಮ್ಮೆ ಬಿಂದುವಿನ ಮೈಯಲ್ಲಿ ಸೆಖೆಗೋ ಏನೋ, ಸಣ್ಣ ಸಣ್ಣ ಬೆವರುಸಾಲೆ ಬಿದ್ದಾಗ ಅದನ್ನು ನೀವು ಸಿಡುಬು ಎಂದು ಕರೆದಿರಿ. ಬಿಂದುವಿನ ಮೇಲೆ ಯಾವುದೇ ಆರೋಪ ಹೊರಿಸುವುದಕ್ಕೆ ಯಾವುದೇ ಪುರಾವೆ ಬೇಕಿರಲಿಲ್ಲ, ಪುರಾವೆಗಾಗಿ ಅವಳು 'ಬಿಂದು' ಆಗಿ ಹುಟ್ಟಿರುವುದೇ ಸಾಕಾಗಿತ್ತು.

ಬಿಂದು ದೊಡ್ಡವಳಾಗ ತೊಡಗಿದಳು. ಜತೆ ಜತೆ ನಿಮ್ಮಗಳ ಕಣ್ಣೂ ದೊಡ್ಡದಾಗ ತೊಡಗಿತು. ಹುಡುಗಿಯನ್ನು ಮನೆಯಿಂದ ಹೊರಗೆ ಹಾಕುವ ಯಾವುದೇ ಪ್ರಯತ್ನ ಫಲಿಸದಾಗ ಅವಳ ಮದುವೆ ನಿಶ್ಚಯ ಮಾಡಿದಿರಿ. ಹುಡುಗನ ಕಡೆಯವರು ಹುಡುಗಿಯನ್ನು ನೋಡುವುದಕ್ಕೂ ಬರಲಿಲ್ಲ. ಮದುವೆ ಹುಡುಗನ ಮನೆಯಲ್ಲೇ ನಡೆಯುವುದೆಂದು ನೀವೆಲ್ಲಾ ಹೇಳಿದಿರಿ. ಇದೇ ಅವರ ಮನೆಯ ಪದ್ಧತಿ ಎಂದಿರಿ.

ನನ್ನ ಹೃದಯ ನಡುಗುತ್ತಿತ್ತು. ಮದುವೆಯ ದಿನದವರೆಗೂ ಬಿಂದು ತನ್ನ ಅಕ್ಕನ ಕಾಲು ಹಿಡಿದು "ಅಕ್ಕಾ, ನನ್ನನ್ನು ಈ ರೀತಿ ಮನೆಯಿಂದ ಹೊರಗೆ ಹಾಕಬೇಡ. ನಾನು ನಿಮ್ಮ ಹಟ್ಟಿಯ ಮೂಲೆಯಲ್ಲಿ ಬಿದ್ದುಕೊಂಡಿರುತ್ತೇನೆ. ನೀವು ಏನು ಹೇಳಿದರೂ ಮಾಡ್ತೇನೆ." ಅಂತ ಕೇಳಿಕೊಳ್ಳುತ್ತಿದ್ದಳು.

ಅಸಹಾಯಕ ಹುಡುಗಿ ನನ್ನ ಬಳಿ ಹೇಳಿದಳು, "ಅಕ್ಕಾ, ನಾನು ನಿಜಕ್ಕೂ ಒಂಟಿಯಾದೆನೇ ?" ನಾನು ಹೇಳಿದೆ, "ಇಲ್ಲ ಬಿಂದೀ ಇಲ್ಲ, ನಿನಗೆ ಎಂತಹುದೇ ಸ್ಥಿತಿ ಬರಲಿ ನಾನು ಸಹಾ ನಿನ್ನೊಂದಿಗೆ ಇದ್ದೇನೆ". ಹಿರಿಯಕ್ಕನ ಕಣ್ಣಲ್ಲಿ ನೀರು ತುಂಬಿತ್ತು, ತಡೆದುಕೊಳ್ಳುತ್ತಾ ಆಕೆ ಹೇಳಿದಳು - "ಬಿಂದಿಯಾ, ನೆನಪಿರಲಿ ಪತ್ನಿಗೆ ಪತಿಯೇ ಪರಮೇಶ್ವರ".

ಬಿಂದಿಯ ಮದುವೆಯಾಗಿ ಮೂರು ದಿನವಾಗಿತ್ತು, ಬೆಳಗ್ಗೆ ದನ-ಎಮ್ಮೆಯ ನೋಡಲು ಹಟ್ಟಿ ಕಡೆಗೆ ಹೋದಾಗ ಒಂದು ಮೂಲೆಯಲ್ಲಿ ಬಿದ್ದುಕೊಂಡಿದ್ದಳು ಬಿಂದು. ನನ್ನನ್ನು ನೋಡಿ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅವಳ ಗಂಡ ಹುಚ್ಚ ಎಂದು ಬಿಂದು ಹೇಳಿದಳು. ಕರುಣೆಯಿಲ್ಲದ ಅತ್ತೆ ಮತ್ತು ಹುಚ್ಚ ಗಂಡನಿಂದ ಬಚಾವಾಗಿ ಅವಳು ಬಹಳ ಪ್ರಯಾಸದಿಂದ ಓಡಿ ಬಂದಿದ್ದಳು.

ಸಿಟ್ಟು ಮತ್ತು ಜುಗುಪ್ಸೆಯಿಂದ ನನ್ನ ದೇಹ ಉರಿಯುತ್ತಿತ್ತು. "ಇಂತಹಾ ಮೋಸವೂ ಒಂದು ಮದುವೆಯೇ ? ನೀನು ನನ್ನೊಂದಿಗೇ ಇರು. ನಿನ್ನನ್ನು ಯಾರು ಕರೆದೊಯ್ಯುತ್ತಾರೋ ನೋಡುತ್ತೇನೆ" ಎಂದೆ ನಾನು.

ನಿಮ್ಮೆಲ್ಲರಿಗೂ ನನ್ನ ಮೇಲೆ ಬಹಳ ಸಿಟ್ಟು ಬಂತು. "ಬಿಂದು ಸುಳ್ಳು ಹೇಳುತ್ತಿದ್ದಾಳೆ" ಎಂದು ಎಲ್ಲರೂ ಹೇಳತೊಡಗಿದರು. ಸ್ವಲ್ಪ ಸಮಯದಲ್ಲೇ ಬಿಂದುವಿನ ಅತ್ತೆ ಮನೆಯವರು ಅವಳನ್ನು ಕರೆದೊಯ್ಯ ಬಂದರು.





ನನ್ನನ್ನು ಅವಮಾನದಿಂದ ಉಳಿಸಲು ಬಿಂದು ತಾನಾಗಿಯೇ ಅವರೆದುರು ಬಂದು ನಿಂತಳು. ಅವರು ಬಿಂದುವನ್ನು ಕರೆದೊಯ್ದರು. ನನ್ನ ಮನಸ್ಸು ನೋವಿಂದ ಚೀರುತ್ತಿತ್ತು.ನನಗೆ ಬಿಂದುವನ್ನು ತಡೆಯಲಾಗಲಿಲ್ಲ. ಇನ್ನು ಬೇಕಾದರೆ ಸಾವೇ ಬರಲಿ ಬಿಂದು ನಮ್ಮ ಆಶ್ರಯಕ್ಕೆ ಬರಲಾರಳು ಎಂಬುದು ನನಗೆ ಗೊತ್ತಿತ್ತು.

ಅಷ್ಟರಲ್ಲೇ ನನಗೆ ದೊಡ್ಡ ಅತ್ತೆಯವರು ಜಗನ್ನಾಥಪುರಿಗೆ ತೀರ್ಥಯಾತ್ರೆಗೆ ಹೋಗುವ ಸುದ್ದಿ ಸಿಕ್ಕಿತು. "ನಾನೂ ಹೋಗುತ್ತೇನೆ" ಅಂದೆ. ನಿಮಗೆಲ್ಲಾ ಕೇಳಿ ಖುಶಿಯಾಯಿತು.

ನಾನು ನನ್ನ ತಮ್ಮ ಶರತ್‌ಗೆ ಹೇಳಿ ಕಳುಹಿಸಿದೆ. "ತಮ್ಮಾ ಮುಂದಿನ ಬುಧವಾರ ನಾನು ಪುರಿಗೆ ಹೋಗುತ್ತೇನೆ. ಹೇಗಾದರೂ ಮಾಡಿ ಬಿಂದು ಅದೇ ಗಾಡಿಯಲ್ಲಿ ಬಂದು ಸೇರುವಂತೆ ಮಾಡು" ಎಂದು ಹೇಳಿದೆ. ಅದೇ ದಿನ ಸಾಯಂಕಾಲ ಶರತ್ ವಾಪಾಸು ಬಂದ. ಅವನ ಬಾಡಿದ ಮುಖ ನೋಡಿದಾಗ ನನ್ನ ಹೊಟ್ಟೆಯಲ್ಲಿ ಕಳವಳವಾಯಿತು. "ಅವಳನ್ನು ಒಪ್ಪಿಸಲಾರದೆ ಹೋದೆಯಾ ?" ಅವನ ಬಳಿ ವಿಚಾರಿಸಿದೆ. "ಅದರ ಅಗತ್ಯವೇ ಇಲ್ಲ, ಬಿಂದು ನಿನ್ನೆ ಬೆಂಕಿ ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದಾಳೆ" ಎಂದು ಶರತ್ ಉತ್ತರಿಸಿದ. ನಾನು ಸ್ತಬ್ಧಳಾಗಿ ಬಿಟ್ಟೆ.

ನಾನು ತೀರ್ಥಯಾತ್ರೆಗಾಗಿ ಜಗನ್ನಾಥಪುರಿಗೆ ಬಂದಿದ್ದೇನೆ. ಬಿಂದುವಿಗೆ ಇಲ್ಲಿಯ ತನಕ ಬರುವ ಅಗತ್ಯ ಬೀಳಲಿಲ್ಲ, ಆದರೆ ನನಗೆ ಇದರ ಅಗತ್ಯ ಇತ್ತು.

ಯಾವುದನ್ನು ಜನ ದುಃಖ-ಕಷ್ಟ ಅನ್ನುತ್ತಾರೋ, ಅದು ನನ್ನ ಜೀವನದಲ್ಲಿ ಇರಲಿಲ್ಲ, ನಿಮ್ಮ ಮನೆಯಲ್ಲಿ ಊಟ-ತಿಂಡಿಗೆ ಯಾವತ್ತೂ ಕಮ್ಮಿ ಇರಲಿಲ್ಲ, ನಿಮ್ಮ ದೊಡ್ಡ ಅಣ್ಣನ ಚಾರಿತ್ಯ ಹೇಗೆ ಇರಲಿ, ನಿಮ್ಮ ಚಾರಿತ್ಯದಲ್ಲಿ ಏನೂ ಕೊರತೆ ಇರಲಿಲ್ಲ, ದೂರುವುದಕ್ಕೆ ನನಗೆ ಏನೂ ಇಲ್ಲ, ಆದರೆ ನಾನು ಹಿಂತಿರುಗಿ ನಿಮ್ಮ ಮನೆಗೆ ಬರಲಾರೆ. ನಾನು ಬಿಂದುವನ್ನು ನೋಡಿದೆ. ಮನೆ-ಗೃಹಸ್ಥಿ ನಡೆಸುವ ಹೆಂಗಸಿನ ಪರಿಚಯವೂ ನನಗೆ ಆಗಿ ಆಯಿತು. ಇನ್ನು ನನಗೆ ಅದರ ಅಗತ್ಯವಿಲ್ಲ, ನಾನು ನಿಮ್ಮ ಚೌಕಟ್ಟನಿಂದ ಹಾರಿ ಆಯಿತು. ಈ ಸಮಯದಲ್ಲಿ ನಾನು ಅನಂತ ನೀಲ ಸಮುದ್ರದ ಮುಂದೆ ನಿಂತಿರುವೆ.

ನೀವುಗಳೆಲ್ಲಾ ನಿಮ್ಮ ನೀತಿ-ನಿಯಮಗಳ ಪರದೆಯಲ್ಲಿ ನನ್ನನ್ನು ಬಂಧಿಸಿಟ್ಟಿದ್ದೀರಿ. ಬಿಂದು, ಎಲ್ಲಿಂದ ಈ ಪರದೆ ಹಿಂದಿರುವ ನನ್ನನ್ನು ಇಣಕಿ ನೋಡಿದಳೋ ನನಗೆ ಗೊತ್ತಿಲ್ಲ, ಮತ್ತು ಅದೇ ಬಿಂದುವಿನ ಮೃತ್ಯು ನನ್ನ ಈ ಪರದೆಯನ್ನು ಬೀಳಿಸಿ ನನಗೆ ಸ್ವಾತಂತ್ಯ ಕೊಟ್ಟಿತು. ಮಧ್ಯಮ ಸೊಸೆ ಇನ್ನಿಲ್ಲ.

ಬಿಂದು ತರಹ ನಾನು ಸಾಯಲು ಹೊರಟಿರುವೆನೆಂದು ನೀವು ಯೋಚಿಸುತ್ತಿರುವಿರೇನು ! ಹೆದರಬೇಡಿ ನಾನು ನಿಮ್ಮೊಂದಿಗೆ ಹಿಂದಿನಂತೆ ತಮಾಷೆ ಮಾಡುವುದಿಲ್ಲ.

ಮೀರಾಬಾಯಿ ಕೂಡಾ ನನ್ನಂತಹ ಒಬ್ಬ ಹೆಂಗಸು. ಅವಳ ಬಂಧನಗಳೂ ಕಡಿಮೆ ಏನೂ ಇರಲಿಲ್ಲ, ಅವುಗಳಿಂದ ಮುಕ್ತಳಾಗಲು ಅವಳೇನು ಆತ್ಮಹತ್ಯೆ ಮಾಡಿಕೊಳ್ಳಬೇಕಾಗಿ ಬರಲಿಲ್ಲ, ನನಗೆ ನನ್ನ ಮೇಲೆ ಭರವಸೆ ಇದೆ. ನಾನು ಬದುಕಬಲ್ಲೆ, ನಾನು ಬದುಕುತ್ತೇನೆ.

ನಿಮ್ಮೆಲ್ಲರ ಆಶ್ರಯದಿಂದ ಮುಕ್ತಳಾದ,

ಮೃಣಾಲ

# ಅರ್ಥವೇನು ?

9 ವಿಷಯ : ಲಿಂಗತ್ವದ ಪರಿಕಲ್ಪನೆಗಳು

**ಕನಿಷ್ಠ ಸಮಯ :**

1 ಗಂಟೆ 30 ನಿ.

**ತಯಾರಿ :**

ಚರ್ಚಿಸಬೇಕಾದ ಅಂಶಗಳನ್ನು ಗುರುತುಮಾಡಿ ಇಟ್ಟುಕೊಳ್ಳಿ.

**ಅಡಕ :**

ಲಿಂಗತ್ವದ ಪರಿಕಲ್ಪನೆಗಳ ವಿವರಣೆ

ಪುಟ - 23

**ಉದ್ದೇಶ :**

* ಲಿಂಗತ್ವದ ಮುಖ್ಯ ಕೆಲವು ಪರಿಕಲ್ಪನೆಗಳನ್ನು ಸರಳವಾಗಿ ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* ಒಟ್ಟು ಗುಂಪಿನೊಂದಿಗೆ ಮಾತುಕತೆ ನಡೆಸುತ್ತಾ ಮುಖ್ಯವಾದ ಪರಿಕಲ್ಪನೆಗಳನ್ನು ಚರ್ಚೆಗೆ ಎತ್ತಿಕೊಳ್ಳಿ.
* ಬೆಳಗಿನಿಂದ - ಚರ್ಚೆಯಾದ ಅಂಶಗಳನ್ನು ನೆನಪಿಸಿಕೊಳ್ಳುತ್ತಾ - ಚರ್ಚೆ ಪ್ರಾರಂಭಿಸಬಹುದು.
* ಮುಖ್ಯವಾಗಿ ಹೆಣ್ಣು ಗಂಡು ಭೇದಗಳು ಲಿಂಗಕ್ಕೆ ಮಾತ್ರ ಸೀಮಿತ. ಉಳಿದುದೆಲ್ಲಾ ಹುಟ್ಟಿನಿಂದ ಬಂದುದಲ್ಲ. ಹೆಂಗಸರೇ ಮಾಡಬೇಕಾಗಿರುವ ಕೆಲಸಗಳು. ಗಂಡಸರೇ ಮಾಡಬೇಕಾಗಿರುವ ಕೆಲಸಗಳು ಯಾವುವು ? ಇದರಲ್ಲಿ ಸೂಕ್ಷ್ಮವಾಗಿ ಅಡಗಿರುವ ಅಧಿಕಾರದ, ಹಣದ ಅಂಶಗಳು,

- ನಮ್ಮ ಸಂಪನ್ಮೂಲಗಳು, ಅವುಗಳ ಮೇಲಿನ ಅಧಿಕಾರ ಯಾರಿಗೆ ಹೆಚ್ಚು ಇದೆ, ಸಶಕ್ತತೆ ಎಂದರೇನು ?
- ಮಹಿಳೆಯರ ಇತಿಹಾಸ - ಇವೇ ಮುಂತಾದ ವಿಚಾರಗಳು ಚರ್ಚೆಗೆ ಬರಲಿ - ಹರಟೆ ಹೊಡೆಯುವಂತೆ - ಸರಳವಾಗಿ ಇದ್ದರೆ ಸಾಕು.

**ಗಮನಿಸಬೇಕಾದ ಅಂಶ :**

* ಪ್ರತಿಯೊಂದು ವಿಚಾರವೂ ಬರಬೇಕಾಗಿಲ್ಲ. ಆದರೆ ಮಹಿಳೆಯರ ಭಾಗವಹಿಸುವಿಕೆಯಲ್ಲಿ - ಕೆಲವು ಮಾತುಕತೆಗಳು ನಡೆಯಲಿ, ದೊಡ್ಡ ಶಬ್ದಗಳು ಬೇಕಾಗಿಲ್ಲ - ವಿಚಾರಗಳು ಬರಲಿ.
* 'ಕುಸುಮ', 'ಅವ್ವ', ಹೀಗೇಕೆ - ಹೀಗಿರಲಿ, ಲಿಂಗತ್ವ ಮತ್ತು ಸಶಕ್ತತೆ - ಸಿದ್ಧಾಂತ ಮತ್ತು ಅಳವಡಿಕೆ ಇವುಗಳನ್ನು ಬಳಸಬಹುದು.
* ತೀರಾ ತುರ್ತಿನ ಸಹಾಯಕ್ಕಾಗಿ ಕೆಲವೊಂದು ಮುಖ್ಯ ಪರಿಕಲ್ಪನೆಗಳ ಸರಳ ವಿವರಣೆಯನ್ನು ಇದರೊಂದಿಗೇ ನೀಡಲಾಗಿದೆ.

**ನಿರೀಕ್ಷಿತ ಫಲಿತಾಂಶ :**

* ಎಲ್ಲಾ ಅನುಭವಗಳ, ಮಹಿಳಾ ದೌರ್ಜನ್ಯದ ಹಿಂದೆ ಒಂದು ಅರ್ಥ ಇದೆ, ಒಂದು ಸಿದ್ಧಾಂತ ಇದೆ ಎಂಬುದು ತಿಳಿಯಬೇಕು.

**ವೈಯಕ್ತಿಕ ಟಿಪ್ಪಣಿ :**

# ಲಿಂಗತ್ವದ ಕೆಲವು ಪರಿಕಲ್ಪನೆಗಳು

(ಲಿಂಗತ್ವದ ಪರಿಕಲ್ಪನೆಗೆ ಸಂಬಂಧಿಸಿ ಅನೇಕ ಲೇಖನಗಳನ್ನು ನೀವು ಓದಿರುತ್ತೀರಿ. ಮಹಿಳಾ ಸಮಖ್ಯಾ ಪ್ರಕಟಣೆಗಳಲ್ಲೂ ಈ ಬಗ್ಗೆ ಸಾಕಷ್ಟು ವಿವರಗಳಿವೆ. ಆದರೂ ಹೆಜ್ಜೆಗಳನ್ನು ಉಪಯೋಗಿಸುವಾಗ ಮತ್ತೊಮ್ಮೆ ಲಿಂಗತ್ವದ ಪರಿಕಲ್ಪನೆಯನ್ನು ಹರಿತ ಮಾಡಿಕೊಳ್ಳಬೇಕಾಗುತ್ತದೆ. ಈ ಪರಿಕಲ್ಪನೆಯನ್ನು ವಿವರಿಸುವಂತಹ ಅನೇಕ ಪದಗಳು ಈ ನಡುವೆ ಹುಟ್ಟಿಕೊಂಡಿವೆ. ಎಷ್ಟೋ ಸಾರಿ, ಈ ಪದಗಳು ಪರಿಚಯವಾಗದೆ ಇರುವುದರಿಂದ ಕೆಲವು ಲೇಖನಗಳು ಅರ್ಥವಾಗದೇ ಹೋಗಬಹುದು. ಅದಕ್ಕಾಗಿ ಇಲ್ಲಿ ಲಿಂಗತ್ವದ ಪರಿಕಲ್ಪನೆಯಲ್ಲಿ ಬರುವ ಕೆಲವು ಮುಖ್ಯ ಪದಗಳನ್ನೇ ಇಟ್ಟುಕೊಂಡು ವಿವರ ನೀಡಲಾಗಿದೆ. ಮಹಿಳೆಯರೊಂದಿಗೆ ಚರ್ಚಿಸುವಾಗ ಈ ಪದಗಳನ್ನು ಉಪಯೋಗಿಸ ಬೇಕಾಗಿಲ್ಲ. ವಿಚಾರಗಳನ್ನು ಅವಕಾಶ ಸಿಕ್ಕಾಗಲೆಲ್ಲಾ ಎತ್ತಿಕೊಳ್ಳಬಹುದು. ಪದಗಳನ್ನು ಕಾರ್ಯಕರ್ತರಿಗಾಗಿಯೇ ಪರಿಚಯಿಸಲಾಗಿದೆ. ಈ ಪದಗಳಿಗೆ ಜನಸಾಮಾನ್ಯರ ಭಾಷೆಯಲ್ಲಿ ಹೊಸ, ಸರಳ ಪದಗಳೇನಾದರೂ ಸಿಕ್ಕರೆ ಅದನ್ನೂ ಗುರುತಿಸಿಕೊಳ್ಳಿ.)

## ಲಿಂಗತ್ವ (ಜೆಂಡರ್)

ಮಹಿಳೆ ಮತ್ತು ಪುರುಷರ ನಡುವೆ ಕೆಲವೊಂದು ದೈಹಿಕ ವ್ಯತ್ಯಾಸಗಳಿವೆ. ಅದೂ ಮುಖ್ಯವಾಗಿ ಜನನಾಂಗಕ್ಕೆ ಸಂಬಂಧಿಸಿದ ಹಾಗೆ. ಇದನ್ನು ಲಿಂಗಭೇದವೆನ್ನುತ್ತಾರೆ.

ಆದರೆ ಮಹಿಳೆ ಮತ್ತು ಪುರುಷರ ಮಧ್ಯೆ ಅನೇಕ ಭೇದಗಳನ್ನು ಸಮಾಜವೇ ಬೆಳೆಸಿಕೊಂಡು ಬಂದಿದೆ. ಉದಾಹರಣೆಗೆ ಹೆಂಗಸರಿಗೆ ಶಿಕ್ಷಣ ಬೇಕಾಗಿಲ್ಲ. ಮನೆಕೆಲಸ ಹೆಂಗಸರಿಗೇ ಮೀಸಲು. ಗಂಡಸರು ಮಾಡಬೇಕಾಗಿಲ್ಲ. ಹೆಂಗಸರಿಗೆ ಉದ್ದ ಕೂದಲು ಚಂದ. ಗಂಡಸರಿಗೆ ಗಿಡ್ಡ ಕೂದಲೇ ಇರಬೇಕು. ಎಲ್ಲಕ್ಕಿಂತಲೂ ಹೆಚ್ಚಾಗಿ, ಹೆಂಗಸರಿಗಿಂತ ಗಂಡಸರ ಸ್ಥಾನಮಾನ ಹೆಚ್ಚು. ಇವೆಲ್ಲವೂ ಸಮಾಜವೇ ಕಲಿಸಿ ಕೊಡುತ್ತದೆ. ಹೀಗೆ ಸಮಾಜವೇ ಕಲಿಸಿಕೊಡುವಂತಹ ತಾರತಮ್ಯವನ್ನೇ 'ಲಿಂಗತ್ವ' ಎನ್ನುತ್ತಾರೆ.

ಲಿಂಗತ್ವದ ಸ್ವರೂಪ ಬೇರೆ ಬೇರೆ ಪ್ರದೇಶಗಳಿಗೆ, ಜಾತಿಗೆ, ಧರ್ಮಕ್ಕೆ, ಸಮುದಾಯಕ್ಕೆ, ಕಾಲಕ್ಕೆ ತಕ್ಕಂತೆ ಬದಲಾಗುತ್ತಲೇ ಇರುತ್ತದೆ.

ನಮ್ಮ ಸಮಾಜದಲ್ಲಿ ಹೆಚ್ಚಿನವರೂ ಲಿಂಗತ್ವವನ್ನು ಇದುವೇ ಸತ್ಯ, ಹಿಂದಿನಿಂದಲೂ ಹೀಗೇ ಇದ್ದುದು ಎಂದು ಒಪ್ಪಿಕೊಂಡು ಬದುಕುತ್ತಿದ್ದಾರೆ. ನಾವು ಈ ರೀತಿಯ ತಾರತಮ್ಯ ಸರಿಯಲ್ಲ ಎಂದು ಅದನ್ನು ಪ್ರಶ್ನಿಸುತ್ತಿದ್ದೇವೆ. ಸಮಾನತೆಯ ಕನಸು ಕಾಣುತ್ತಿದ್ದೇವೆ.

## ಪಿತೃಪ್ರಧಾನತೆ / ಪುರುಷ ಪ್ರಧಾನತೆ

ಪಿತೃಪ್ರಧಾನ ಸಮಾಜ ಎಂದು ನಾವು ಆಗಾಗ ಹೇಳುತ್ತಿರುತ್ತೇವೆ. ಪಿತೃಪ್ರಧಾನತೆ ಹೆಸರೇ ಸೂಚಿಸುವಂತೆ, ತಂದೆಯ ಆಳ್ವಿಕೆ ಎಂಬ ಅರ್ಥ ಹೊಂದಿದೆ. ಕುಟುಂಬದ ವ್ಯವಸ್ಥೆಯಿಂದ ಹಿಡಿದು, ಒಟ್ಟು ಸಮಾಜದ ಆಗು-ಹೋಗುಗಳು ಪುರುಷರ ನಿರ್ಧಾರದಂತೆ, ಪುರುಷರ ನಿಯಂತ್ರಣದಲ್ಲಿ, ಪುರುಷರ ಯಜಮಾನಿಕೆಯಲ್ಲಿ ನಡೆಯುತ್ತದೆ. ಎಲ್ಲಾ ರೀತಿಯ ಸಂಪನ್ಮೂಲಗಳ ಮೇಲೆ ಪುರುಷರಿಗೆ ಅಧಿಕಾರವಿರುತ್ತದೆ.

ಈ ಪುರುಷ ಪ್ರಧಾನ ವ್ಯವಸ್ಥೆಯನ್ನು ಗಟ್ಟಿಯಾಗಿ ಉಳಿಸಿಕೊಳ್ಳುವುದಕ್ಕಾಗಿ ಹೆಣ್ತನವನ್ನು ಮೆಟ್ಟಿ ನಿಲ್ಲುವ ಕ್ರಿಯೆಗಳು ನಡೆಯುತ್ತವೆ.

* ಆಕೆ ಹುಟ್ಟುವುದಕ್ಕೆ ಮೊದಲೇ ಅಥವಾ ಹುಟ್ಟಿದ ತಕ್ಷಣ ಆಕೆ ಹೆಣ್ಣೆಂದು ತಿಳಿದಾಗ ಆಕೆಯನ್ನು ಸಾಯಿಸಿಬಿಡಲಾಗುತ್ತದೆ.
* ಆಕೆ ಹುಟ್ಟಿದಾಗ ಗಂಡು ಹುಟ್ಟಿದಷ್ಟು ಸಂತೋಷವಾಗುವುದಿಲ್ಲ.
* ಆಹಾರದಲ್ಲಿ ಆಕೆಗೆ ಸಮಪಾಲು ಇರುವುದಿಲ್ಲ.
* ಮನೆಕೆಲಸಕ್ಕೇ, ಒಳ್ಳೆ ತಾಯಿ-ಹೆಂಡತಿ ಆಗುವುದಕ್ಕೇ ಅವಳನ್ನು ತಯಾರು ಮಾಡಲಾಗುತ್ತದೆ.

  (ಒಳ್ಳೆ ತಂದೆ-ಗಂಡ ಆಗುವಂತಹ ತಯಾರಿ ಕಂಡು ಬರುವುದಿಲ್ಲ)
* ಅಣ್ಣ ತಮ್ಮಂದಿರಂತೆ ಓಡಾಡುವ ಅವಕಾಶ ಕೊಡುವುದಿಲ್ಲ. ಆಕೆಯ ಶಾಲೆ, ಶಿಕ್ಷಣದ ಬಗ್ಗೆ ಒಂದು ರೀತಿಯ ಉದಾಸೀನ.
* ಗಂಡ-ಹೆಂಡತಿಯನ್ನು ಹೊಡೆಯಬಹುದಾದ ಒಂದು ವಾತಾವರಣವಿರುತ್ತದೆ.
* ಕಛೇರಿಗಳಲ್ಲಿ, ಸಾರ್ವಜನಿಕ ಕ್ಷೇತ್ರಗಳಲ್ಲಿ ಅಲ್ಲದೆ ಮನೆಗಳಲ್ಲೂ ಕೂಡಾ ಲೈಂಗಿಕ ಕಿರುಕುಳ ಆಕೆಯ ಪಾಲಿಗೆ.
* ಅಪ್ಪನ ಆಸ್ತಿಯಲ್ಲಿ ಪಾಲು ಅನುಮಾನಾಸ್ಪದವೇ.
* ಗಂಡನಿಗೆ ಬೇಕೆಂದಾಗ ತನ್ನನ್ನು ತಾನು ಅವನಿಗೆ ಒದಗಿಸಬೇಕು. ತನ್ನ ಲೈಂಗಿಕ ಸುಖ ಸ್ವಾತಂತ್ರ್ಯ ಮೈಲಿ ದೂರ.
* ಕುಟುಂಬ ಯೋಜನಾವಿಧಾನಗಳನ್ನು ಅನುಸರಿಸಬೇಕೆಂದರೂ, ನೂರಾರು ಅಡ್ಡಿ ಆತಂಕಗಳು.

## ಲಿಂಗಾಧಾರಿತ ಶ್ರಮ ವಿಭಜನೆ

ಮನೆಯ ಮತ್ತು ಸಮುದಾಯದ ಕೆಲಸ ಕಾರ್ಯಗಳನ್ನು ಹೆಂಗಸರೂ, ಗಂಡಸರೂ ಸೇರಿಯೇ ಮಾಡುತ್ತಾರೆ. ಆದರೆ ಅವರ ಕೆಲಸದ ಗುಣಗಳು ಬೇರೆ ಮತ್ತು ಅದಕ್ಕೆ ಇರುವ ಬೆಲೆಯಲ್ಲೂ ಹೆಚ್ಚು ಕಡಿಮೆ ಇರುತ್ತದೆ. ನಮ್ಮ ಸಮಾಜ ಗಂಡಸರಿಗೂ ಹೆಂಗಸರಿಗೂ ಬೇರೆ ಬೇರೆಯೇ ಪಾತ್ರ, ಜವಾಬ್ದಾರಿ ಮತ್ತು ಚಟುವಟಿಕೆಗಳನ್ನು ವಹಿಸಿಕೊಟ್ಟಿದೆ. ಉದಾಹರಣೆಗೆ ಅಡುಗೆ ಕೆಲಸ, ಮಕ್ಕಳ ಲಾಲನೆ ಪಾಲನೆ, ಹೆಂಗಸರಿಗೆ, ಆಫೀಸು ಕೆಲಸ, ಮನೆಯ ಹೊರಗಿನ ವ್ಯವಹಾರ ಗಂಡಸರಿಗೆ. ಇದನ್ನೇ ಲಿಂಗಾಧಾರಿತ ಶ್ರಮ ವಿಭಜನೆ ಎನ್ನುತ್ತಾರೆ.

ಗಂಡಸರ ಕೆಲಸಕ್ಕಿರುವ ಬೆಲೆಯಾಗಲೀ, ಮರ್ಯಾದೆಯಾಗಲೀ ಹೆಂಗಸರ ಕೆಲಸಕ್ಕೆ ಸಿಗುವುದಿಲ್ಲ, ಹೆಂಗಸರ ಕೆಲಸವನ್ನು ಕೆಲಸವೆಂದೂ ನೋಡುವುದಿಲ್ಲ, ದೇಶದ ಆರ್ಥಿಕ ಸೂಚಕಗಳಲ್ಲೂ ಹೆಚ್ಚಾಗಿಯೂ ಹೆಂಗಸರ ಕೆಲಸವನ್ನು ಬಿಟ್ಟೇ ಬಿಡುತ್ತಾರೆ.

ಇದೂ ಕೂಡಾ ಬೇರೆ ಬೇರೆ ಸಮುದಾಯ, ಸಂಸ್ಕೃತಿ, ಸಮಯಕ್ಕೆ ತಕ್ಕ ಹಾಗೆ ಬದಲಾಗುತ್ತಿರುತ್ತದೆ.

## ಉತ್ಪಾದಕ, ಮರುಉತ್ಪಾದಕ ಮತ್ತು ಸಾಮುದಾಯಿಕ ಕೆಲಸ

* ಉತ್ಪಾದಕ ಕೆಲಸ ಎಂದರೆ, ಸರಕುಗಳ ಉತ್ಪಾದನೆ ಮತ್ತು ಬಳಕೆದಾರರು ಕೊಂಡುಕೊಳ್ಳುವಂತಹ ಕೆಲಸ ಕಾರ್ಯ ಮತ್ತು ವ್ಯಾಪಾರ. (ಕೃಷಿ, ಮೀನುಗಾರಿಕೆ, ಉದ್ಯೋಗ, ಸ್ವ-ಉದ್ಯೋಗ) ಯಾರನ್ನೇ ಆಗಲಿ, ಅವರು ಏನು ಕೆಲಸ ಮಾಡುತ್ತಾರೆ ಎಂದು ಪ್ರಶ್ನಿಸಿದರೆ, ಅವರು ಹೆಚ್ಚಾಗಿ ಹೇಳುವುದು ಅವರು ಮಾಡುವ ಉತ್ಪಾದಕ ಕೆಲಸವನ್ನು. ಅಂದರೆ ಇದರಲ್ಲಿ ಸಂಭಾವನೆ ಅಥವಾ ಆದಾಯ ಇರುತ್ತದೆ. ಮಹಿಳೆಯರೂ, ಪುರುಷರೂ ಇಬ್ಬರೂ ಉತ್ಪಾದಕ ಕೆಲಸಗಳನ್ನು ಮಾಡುತ್ತಾರೆ. ಆದರೆ ಇಲ್ಲೂ ಕೂಡಾ ಲಿಂಗಾಧಾರಿತ ಶ್ರಮವಿಭಜನೆಗೆ ಅನುಸಾರವಾಗಿಯೇ ಕೆಲಸಗಳು ಸಿಗುತ್ತವೆ. ಉದಾಹರಣೆಗೆ ಮಹಿಳೆಯರು ಹೆಚ್ಚಾಗಿ ಟೀಚರೋ, ನರ್ಸೋ, ಸೆಕ್ರೆಟರಿಯೋ ಆಗಿರಬೇಕಾಗುತ್ತದೆ. ಅಷ್ಟೇ ಅಲ್ಲ ಮಹಿಳೆಯರ ಉತ್ಪಾದಕ ಕೆಲಸಕ್ಕೂ ಕೂಡಾ ಪುರುಷರ ಕೆಲಸದಷ್ಟು ಬೆಲೆ, ಗುರುತು ಸಿಗುವುದಿಲ್ಲ.

* ಮರು ಉತ್ಪಾದಕ ಕೆಲಸಗಳು ಎಂದರೆ ಮನೆ ಮತ್ತು ಮನೆಯವರೆಲ್ಲರನ್ನು ನೋಡಿಕೊಳ್ಳುವುದು, ಮಕ್ಕಳನ್ನು ಹೆರುವುದು, ಪಾಲನೆ ಪೋಷಣೆ ಮಾಡುವುದು, ಆಹಾರ ತಯಾರಿ, ನೀರು ಮತ್ತು ಉರುವಲು ತರುವುದು, ಮನೆಯವರ ಆರೋಗ್ಯ ಸಂರಕ್ಷಣೆ ಮಾಡುವುದು ಇವೇ ಮುಂತಾದುವುಗಳು. ಮಾನವ ಜನಾಂಗ ಬದುಕಿ ಉಳಿಯಬೇಕಾದರೆ ಈ ಎಲ್ಲಾ ಕೆಲಸಗಳು ಅತಿ ಅಗತ್ಯ. ಆದರೆ ಇದನ್ನು ಒಂದು ನಿಜವಾದ ಕೆಲಸ ಎಂದು ನೋಡುವುದೇ ಇಲ್ಲ, ಎಷ್ಟೋ ಸಾರಿ ನಿಮ್ಮ ಹೆಂಡತಿ ಏನು ಕೆಲಸ ಮಾಡುತ್ತಾರೆ ಅಂತ ಕೇಳಿದರೆ 'ಏನೂ ಇಲ್ಲ' ಎಂದು ಬಿಡುವವರೇ ಹೆಚ್ಚಾಗಿ ಕಂಡುಬರುತ್ತಾರೆ.

ಬಡಜನರಲ್ಲಿ ಈ ಮರುಉತ್ಪಾದಕ ಕೆಲಸಗಳು ಅತ್ಯಂತ ಶ್ರಮದಾಯಕವಾಗಿದೆ. ಮತ್ತು ಸಮಯ ಬಹಳ ಬೇಕಾಗುತ್ತದೆ. ಸಾಮಾನ್ಯವಾಗಿ ಇದು ಮಹಿಳೆಯರ ಮತ್ತು ಹುಡುಗಿಯರ ಜವಾಬ್ದಾರಿಯೇ ಆಗಿ ಹೋಗಿದೆ.

* ಸಾಮುದಾಯಿಕ ಕೆಲಸ ಎಂದರೆ ಊರಿನ ಹಬ್ಬ ಆಚರಣೆಗಳು, ಸಮುದಾಯ ಅಭಿವೃದ್ಧಿ ಚಟುವಟಿಕೆಗಳು, ಸ್ಥಳೀಯ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದು - ಇವೇ ಮುಂತಾದುವುಗಳು. ಇದು ಆದಾಯ ತರುವ ಕೆಲಸಗಳೇನೂ ಅಲ್ಲ, ಇದಕ್ಕೆ ತಮ್ಮದೇ ಆದ ಸಮಯ, ಕೊಡಬೇಕಾಗುತ್ತದೆ. ಆದರೆ ಇಲ್ಲಿ ಕೂಡಾ ಲಿಂಗಾಧಾರಿತ ಶ್ರಮವಿಭಜನೆ ಇದ್ದೇ ಇರುತ್ತದೆ. ಉದಾಹರಣೆಗೆ ಸಾರ್ವಜನಿಕ ಸಭೆಯೊಂದಿದ್ದರೆ ಮಹಿಳೆಯರು ಅಲ್ಲಿ ಪ್ರಾರ್ಥನೆ ಮಾಡುವುದಕ್ಕೆ, ಅತಿಥಿ ಸತ್ಕಾರ ಮಾಡುವುದಕ್ಕೆ ಇರುತ್ತಾರೆ. ಪುರುಷರು ವಿಚಾರ ಮಂಡನೆ, ಚರ್ಚೆ, ಲೆಕ್ಕಪತ್ರಗಳ ವ್ಯವಹಾರ, ಊರಿನ ಅಗತ್ಯಗಳ ಬಗ್ಗೆ ನಿರ್ಧಾರ ತೆಗೆದುಕೊಳ್ಳುವ ಕೆಲಸ ಮಾಡುತ್ತಾರೆ.

## ಸಂಪನ್ಮೂಲಗಳು ಎಟಕುವುದು ಹಾಗೂ ಸಂಪನ್ಮೂಲಗಳ ಮೇಲೆ ನಿಯಂತ್ರಣ

ನಮ್ಮ ಬದುಕಿನಲ್ಲಿ ನಮಗೆ ಅಗತ್ಯವಿರುವ ಎಲ್ಲಾ ಅಂಶಗಳು ಒಂದಲ್ಲ ಒಂದು ರೀತಿಯಲ್ಲಿ ನಮ್ಮ ಸಂಪನ್ಮೂಲಗಳು ಆಗಿವೆ. ಈ ಸಂಪನ್ಮೂಲಗಳು ನಮಗೆ ಎಟಕುವಂತಿದೆಯೇ, ಇದರ ಮೇಲೆ ನಮಗೆ ಹಿಡಿತ/ನಿಯಂತ್ರಣವಿದೆಯೇ ಎಂಬುದು ಇಲ್ಲಿಯ ಮುಖ್ಯ ವಿಚಾರ.

ಸಂಪನ್ಮೂಲಗಳು ಎಟಕುವುದು ಅಂದರೆ ಸಂಪನ್ಮೂಲಗಳನ್ನು ಉಪಯೋಗಿಸುವ ಅವಕಾಶ ಸಿಗುವುದು. ಉದಾಹರಣೆಗೆ ಶಾಲೆಯೊಂದು ಊರಿನಲ್ಲಿ ಇರುವುದು. ಶಾಲೆಗೆ ಹೋಗುವ ಅವಕಾಶ ಸಿಗುವುದು. ಅಂದರೆ ಶಾಲೆ (ಸಂಪನ್ಮೂಲ) ಎಟಕುವ ಹಾಗೆ ಇದೆ

ಎಂದು ಅರ್ಥ. ಅಥವಾ ಮಹಿಳೆಯರಿಗೆ ಸಾಲ ತೆಗೆದುಕೊಳ್ಳುವ ಅವಕಾಶ, ಆರೋಗ್ಯ ಹಾಳಾದಾಗ ಆಸ್ಪತ್ರೆಗೆ ಹೋಗಿ ತೋರಿಸಿಕೊಳ್ಳುವ ಅವಕಾಶ ಇದೆ ಎಂದರೆ ಅವರಿಗೆ ಸಾಲ ಸೌಲಭ್ಯ ಆರೋಗ್ಯ ವ್ಯವಸ್ಥೆ ಎಟಕುವಂತಿದೆ ಎಂದು ಅರ್ಥ. ಅವರು ಅದನ್ನು ತಲುಪಬಹುದು ಎಂದು ಅರ್ಥ.

ಹಿಡಿತ/ನಿಯಂತ್ರಣ ಅಂದರೆ ಇನ್ನೂ ಹೆಚ್ಚು ಗಂಭೀರ ವಿಚಾರ. ಯಾವುದೇ ಸಂಪನ್ಮೂಲದ ಉಪಯೋಗದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವ ಹಕ್ಕು ಹಾಗೂ ಆ ನಿರ್ಧಾರವನ್ನು ಇತರರೂ ಒಪ್ಪಿಕೊಳ್ಳುವಂತಾಗುವುದು, ಇದನ್ನು ಸಂಪನ್ಮೂಲಗಳ ಮೇಲೆ ನಿಯಂತ್ರಣ ಎಂದು ವಿವರಿಸಬಹುದು. ಇದು ಎಲ್ಲಾ ಬಗೆಯ ಸಂಪನ್ಮೂಲಗಳಿಗೆ ಒಂದೇ ರೀತಿಯಾಗಿ ಇರಲಾರದು. ಉದಾಹರಣೆಗೆ ಮಹಿಳೆಗೆ ತನ್ನ ಮದುವೆಗೆ ಸಂಬಂಧಿಸಿದಂತೆ ಯಾರನ್ನು ಮದುವೆಯಾಗಬೇಕು, ಯಾವಾಗ ಆಗ ಬೇಕು, ಎಷ್ಟು ಮಕ್ಕಳನ್ನು ಹೆರಬೇಕು ಎನ್ನುವುದನ್ನು ನಿರ್ಧರಿಸುವ ಹಕ್ಕು ಇದೆಯೆಂದಾದರೆ ಅದನ್ನು ಲೈಂಗಿಕತೆ ಮತ್ತು ಫಲವತ್ತತೆ ಮೇಲೆ ಇರುವ ನಿಯಂತ್ರಣ ಎಂದು ವಿವರಿಸಬಹುದು. ಅದೇ ಸಾರ್ವಜನಿಕ ಸೊತ್ತುಗಳಿಗೆ ಸಂಬಂಧಿಸಿದ್ದಾದರೆ ಅದರ ಉಪಯೋಗದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಲ್ಲಿ ಸಮಾನ ಭಾಗವಹಿಸುವಿಕೆ, ಸಮಾನ ಲಾಭ ಸಿಗುವುದಾದರೆ ಅದನ್ನು ನಿಯಂತ್ರಣ ಎಂದು ಕರೆಯಬಹುದು.

ಊರಿನಲ್ಲಿ ಒಂದು ನದಿ ಇದೆ. ವರ್ಷವಿಡೀ ನೀರು, ಮನೆಯ ಕೆಲಸಗಳಿಗೆ ಬೇಕಾದಷ್ಟು ಸಿಗುತ್ತದೆ ಎಂದಾದರೆ ನದಿ ಎಟಕುವಂತಿದೆ ಎಂದು ಅರ್ಥ. ನದಿಯ ನೀರನ್ನು ಯಾವುದೋ ಕಾರ್ಖಾನೆಗೆ ಸಾಗ ಹಾಕುವುದಕ್ಕಾಗಿ ಊರವರನ್ನೇ ಕೇಳದೆ ಸರಕಾರದವರಾಗಲೀ, ಇತರರಾಗಲೀ ನಿರ್ಧರಿಸಿದರು ಎಂದಾದರೆ ನದಿಯ ಮೇಲೆ ಊರವರಿಗೆ ಹಿಡಿತ/ನಿಯಂತ್ರಣ ಇಲ್ಲ ಎಂದು ಅರ್ಥ. ಅದೇ ಶ್ರಮ ಎಂಬುದನ್ನು ಒಂದು ಸಂಪನ್ಮೂಲ ಎಂದು ತೆಗೆದುಕೊಂಡರೆ, ಮಹಿಳೆಯರಿಗೆ ಎಲ್ಲಾ ರೀತಿಯ ಉದ್ಯೋಗಗಳಲ್ಲಿ ಆಕೆ ಮಹಿಳೆ ಎಂಬ ನೆವ ಹೂಡದೆ, ಕೆಲಸ ಮಾಡುವ ಅವಕಾಶ ಸಿಗುವುದಕ್ಕೇ ಶ್ರಮದ ಮೇಲೆ ನಿಯಂತ್ರಣ ಎನ್ನಬಹುದು.

ಸಂಪನ್ಮೂಲಗಳು ಎಟಕುವಂತಿರುವುದು ಮತ್ತು ಅವುಗಳ ಮೇಲಿನ ನಿಯಂತ್ರಣಗಳಿಗೆ ಸಂಬಂಧಿಸಿದ ಹಾಗೆಯೇ ಮಹಿಳೆಯರ ಸ್ಥಾನಮಾನವನ್ನು ನೋಡಲಾಗುತ್ತದೆ. ಅಂತೆಯೇ ಪುರುಷರಿಗೆ ಹೋಲಿಸಿಯೂ ನೋಡಲಾಗುತ್ತದೆ. ಹಾಗೆ ಪರಿಶೀಲಿಸುವ ಕೆಲವು ಅಂಶಗಳು ಈ ಕೆಳಗಿನಂತಿವೆ.

⁜ ವೈಯಕ್ತಿಕ ಆಸ್ತಿ (ಮನೆ, ಭೂಮಿ, ಒಡವೆ ಇತ್ಯಾದಿ) ಮತ್ತು ಸಂಪನ್ಮೂಲಗಳು ಎಟಕುವಂತಿರುವುದು ಮತ್ತು ಅವುಗಳ ಮೇಲೆ ನಿಯಂತ್ರಣ.
⁜ ಸಾರ್ವಜನಿಕ ಸಂಪನ್ಮೂಲಗಳು (ಶಿಕ್ಷಣ, ಆಸ್ಪತ್ರೆ, ಪಡಿತರ ವ್ಯವಸ್ಥೆ ನೀರು, ಉರುವಲು ಇತ್ಯಾದಿ) ಎಟಕುವಂತಿರುವುದು ಮತ್ತು ಅವುಗಳ ಮೇಲೆ ನಿಯಂತ್ರಣ.
⁜ ಶ್ರಮ ಮತ್ತು ಆದಾಯ ಎಟಕುವಂತಿರುವುದು ಮತ್ತು ಅವುಗಳ ಮೇಲೆ ನಿಯಂತ್ರಣ.
⁜ ಚಲನಶೀಲತೆಯ ಮೇಲೆ ನಿಯಂತ್ರಣ.
⁜ ರಾಜಕೀಯ ವಲಯ ಎಟಕುವಂತಿರುವುದು ಮತ್ತು ಅದರ ಮೇಲೆ ನಿಯಂತ್ರಣ.
⁜ ಗೋಚರವಾಗದಂತಹ ಸಂಪನ್ಮೂಲಗಳಾದ ಮಾಹಿತಿ, ಪ್ರಭಾವ, ರಾಜಕೀಯ ವಿಚಾರ, ಜ್ಞಾನ, ಆತ್ಮವಿಶ್ವಾಸ ಇತ್ಯಾದಿಗಳು ಎಟಕುವಂತೆ ಇರುವುದು ಮತ್ತು ಅವುಗಳ ಮೇಲೆ ನಿಯಂತ್ರಣ.
⁜ ಕಾನೂನು ರಚನೆ / ಕಾನೂನುಗಳು ಎಟಕುವಂತಿರುವುದು ಮತ್ತು ಅವುಗಳ ಮೇಲೆ ನಿಯಂತ್ರಣ.

## ಪರಿಸ್ಥಿತಿ ಮತ್ತು ಸ್ಥಾನಮಾನ

ಸಾಧಾರಣವಾಗಿ ಮಹಿಳೆಯರ ಸುಧಾರಣೆ ಎಂದು ಹೊರಟಾಗ ಪರಿಸ್ಥಿತಿಯನ್ನು ಬದಲಾಯಿಸುವ ಕಡೆಗೆ ಹೆಚ್ಚಿನ ಗಮನ ಇರುತ್ತದೆ. ಆದರೆ ಲಿಂಗತ್ವದ ದೃಷ್ಟಿಯಿಂದ ನೋಡುವಾಗ, ದಿನನಿತ್ಯದ ಬದುಕಿನ ಪರಿಸ್ಥಿತಿಯನ್ನೂ ಸಮಾಜದಲ್ಲಿ ಮಹಿಳೆಯರ ಸ್ಥಾನಮಾನವನ್ನೂ ಬೇರೆ ಬೇರೆಯಾಗಿ ನೋಡಬೇಕಾಗುತ್ತದೆ.

ಪರಿಸ್ಥಿತಿ ಎಂದರೆ ಮುಖ್ಯವಾಗಿ ಮಹಿಳೆಯರ ದಿನನಿತ್ಯದ ಬೇಡಿಕೆಗಳಿಗೆ ಸಂಬಂಧಿಸಿದ ವಿಚಾರ. ಉದಾಹರಣೆಗೆ ಶುದ್ಧ ನೀರು, ಉರುವಲು, ಆಹಾರ, ಶಿಕ್ಷಣ ಇತ್ಯಾದಿಗಳು. ಮಹಿಳೆಯರ ಬಳಿ "ಹೇಗಿದ್ದೀರಿ ?" ಎಂದು ಕೇಳಿದರೆ ಹೆಚ್ಚಾಗಿ ಅವರ ಪರಿಸ್ಥಿತಿಗೆ ಸಂಬಂಧಿಸಿ ಹೇಳುತ್ತಾರೆ.

ಸ್ಥಾನಮಾನ ಎಂದರೆ ಪುರುಷರಿಗೆ ಹೋಲಿಸಿಕೊಂಡು ಸಮಾಜದಲ್ಲಿ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ವಿಚಾರವನ್ನು ನಿರ್ಧರಿಸುವ ಹಕ್ಕು, ಮಹಿಳೆಯರ ಮಾತಿಗಿರುವ ಮರ್ಯಾದೆ ಎನ್ನಬಹುದು.

ಅಭಿವೃದ್ಧಿ ಯೋಜನೆಗಳು ಮಹಿಳೆಯರ ಮತ್ತು ಪುರುಷರ

ಪರಿಸ್ಥಿತಿ ಮೇಲೆ ಬೀರುವ ಪರಿಣಾಮಗಳೇ ಬೇರೆ ಬೇರೆ ಇರಬಹುದು. ನೀರಿನ ಪೂರೈಕೆಯ ಯೋಜನೆಯೊಂದು ಮಹಿಳೆಯರ ಪರಿಸ್ಥಿತಿಯನ್ನು ಗಮನೀಯವಾಗಿ ಸುಧಾರಿಸಬಹುದು. ಪುರುಷರಿಗ ವಿಶೇಷ ಪ್ರಭಾವ ಬೀರಲಾರದು. ಆದರೆ ಕೃಷಿಯ ಯೋಜನೆಗಳು ಮಹಿಳೆಯರ ಪರಿಸ್ಥಿತಿ ಮೇಲೆ ಕೆಟ್ಟ ಪರಿಣಾಮ ಬೀರುವುದು. ಹೊಸ ರಾಸಾಯನಿಕ ಗೊಬ್ಬರ, ಹಾಕಿದಾಗ ಮಹಿಳೆಯರು ಕಳೆಕೀಳುವಾಗ ಬಹಳ ತೊಂದರೆ ಅನುಭವಿಸಿ 'ಬೇಕಾಗುತ್ತದೆ.

ಒಂದು ನೀರಿನ ಪೂರೈಕೆಯ ಯೋಜನೆಯು ಮಹಿಳೆಯರಿಗೆ ನೀರು ಪೂರೈಸಿದರೆ ಅವರ ಪರಿಸ್ಥಿತಿ ಬದಲಾಗುತ್ತದೆ. ಇದೇ ಯೋಜನೆಯು ಮಹಿಳೆಯರನ್ನು ಪಂಪಿನ ಸಂರಕ್ಷಣೆಯ, ಜವಾಬ್ದಾರಿ ವಹಿಸಿ, ನೀರು ಒದಗಿಸುವ ಸಮಿತಿಯ ಸದಸ್ಯರನ್ನಾಗಿ ಇಟ್ಟುಕೊಂಡರೆ ಮಹಿಳೆಯರ ಸ್ಥಾನಮಾನ ಬದಲಾಗುತ್ತದೆ. ಅಂದರೆ ಇಲ್ಲಿ ನೀರಿನ ಯೋಜನೆಯ ಮೇಲೆ ಮಹಿಳೆಯರಿಗೆ ನಿಯಂತ್ರಣ ಇರುತ್ತದೆ.

## ವ್ಯಾವಹಾರಿಕ ಅಗತ್ಯಗಳು ಮತ್ತು ಕಾರ್ಯತಂತ್ರ ಆಸಕ್ತಿಗಳು (Practical gender needs and strategic gender interests)

* ವ್ಯಾವಹಾರಿಕ ಅಗತ್ಯಗಳು ನೇರವಾಗಿ ಮಹಿಳೆಯರ ಪರಿಸ್ಥಿತಿಗೆ ಸಂಬಂಧಿಸಿದ ಅಂಶವಾಗಿದೆ. ದಿನನಿತ್ಯದ ಬದುಕಿನ ಬೇಡಿಕೆಗಳ ರೂಪದಲ್ಲೇ ಇವು ಇರುತ್ತವೆ. ಉದಾಹರಣೆಗೆ ನೀರು, ಉರುವಲು, ಆರೋಗ್ಯ ಸೌಲಭ್ಯ ಶಿಕ್ಷಣ ಇತ್ಯಾದಿಗಳು. ಈ ವ್ಯಾವಹಾರಿಕ ಅಗತ್ಯಗಳನ್ನು ಪೂರೈಸುವಾಗ ಹೆಚ್ಚಾಗಿ ಪರಿಸ್ಥಿತಿಯಲ್ಲಿ ಸುಧಾರಣೆಯಾಗುತ್ತದೆ. ಇದರಲ್ಲಿ ಮಹಿಳೆಯರ ಮತ್ತು ಪುರುಷರ ಸಂಬಂಧದಲ್ಲಿ ಹೆಚ್ಚು ಬದಲಾವಣೆಯಾಗದೆ, ಸಾಂಪ್ರದಾಯಿಕ (ಮೇಲು ಕೀಳಿನ) ಸಂಬಂಧವೇ ಗಟ್ಟಿಯಾಗುತ್ತದೆ. ಉದಾಹರಣೆಗೆ, ಒಂದು ಕುಕ್ಕರ್ ತಂದರೆ ಮಹಿಳೆಯ ಪರಿಸ್ಥಿತಿಯಲ್ಲಿ ಸ್ವಲ್ಪ ಸುಧಾರಣೆಯಾಗಬಹುದು. ಆದರೆ ಅಡಿಗೆ ಮಾಡುವ ಕೆಲಸ ಅವಳದು ಆಗಿಯೇ ಉಳಿದಿರುತ್ತದೆ. ಅಥವಾ ಮನೆಗೆ ಸಮೀಪ ಒಂದು ಬಾವಿಯ ಸೌಲಭ್ಯ ಸಿಕ್ಕರೆ, ಮಹಿಳೆಯರ ಪರಿಸ್ಥಿತಿ ಸುಧಾರಿಸಬಹುದು. ಆದರೆ ನೀರು ತರುವ ಕೆಲಸದಿಂದ ಮಹಿಳೆಯರಿಗೆ ಬಿಡುಗಡೆ ಸಿಗಲೇ ಬೇಕು ಎಂದೇನೂ ಇಲ್ಲ.

* ಕಾರ್ರತಂತ್ರ ಆಸಕಿಗಳು : ಮಹಿಳೆಯರ ಸ್ಥಾನಮಾನಕ್ಕೆ ಸಂಬಂಧಿಸಿದ ಅಂಶ. ಇದು ನೇರವಾಗಿ, ಸುಲಭವಾಗಿ ಕಣ್ಣಿಗೆ ಕಾಣುವ ಹಾಗೆ ಇರುವುದಿಲ್ಲ. ಹೊಸ ಅವಕಾಶಗಳು, ನಿರ್ಧಾರ ತೆಗೆದುಕೊಳ್ಳುವಲ್ಲಿ ಸಮಾನ ಪಾಲು, ಸಂಪನ್ಮೂಲಗಳು ಎಟಕುವಂತಿರುವುದು ಮತ್ತು ಅವುಗಳ ಮೇಲೆ ನಿಯಂತ್ರಣ ಪಡೆಯುವುದು ಇವೇ ಮೊದಲಾದುವುಗಳು ಕಾರ್ಯತಂತ್ರ ಆಸಕ್ತಿಗಳು.

* ಮಹಿಳೆಯರ ಮೇಲಿನ ಹಿಂಸೆ ಮತ್ತು ಶೋಷಣೆಗಳು ಕಡಿಮೆಯಾಗುವುದು.
* ಹೆಚ್ಚಿನ ಆರ್ಥಿಕ ಸುಭದ್ರತೆ, ಸ್ವಾವಲಂಬನೆ, ಆಯ್ಕೆ ಮತ್ತು ಅವಕಾಶಗಳು ಸಿಗುವುದು.
* ಮರು ಉತ್ಪಾದಕ ಕೆಲಸಗಳ ಜವಾಬ್ದಾರಿಯನ್ನು ಪುರುಷರು ಮತ್ತು ಸರಕಾರ ಹಂಚಿಕೊಳ್ಳುವಂತೆ ಆಗುವುದು.
* ಮಹಿಳೆಯರು ಸಂಘಟಿತರಾಗಿ ಕ್ರಿಯಾಶೀಲರಾಗುವುದು.
* ಹೆಚ್ಚಿನ ರಾಜಕೀಯ ಬಲ
* ಹೆಚ್ಚು ಮಾನವೀಯ ಮತ್ತು ನ್ಯಾಯಯುತ ಅಭಿವೃದ್ಧಿ ಪ್ರಕ್ರಿಯೆಗಳು ನಡೆಯುವುದು

ಇವೇ ಮುಂತಾದುವುಗಳು ಒಂದು ಮಹಿಳಾ ಗುಂಪಿನ ಕಾರ್ಯತಂತ್ರ ಆಸಕ್ತಿಗಳಾಗಿವೆ. ಇದರ ಅರ್ಥ ವ್ಯಾವಹಾರಿಕ ಅಗತ್ಯಗಳನ್ನು ಬಿಟ್ಟೇ ಬಿಡಬೇಕು ಎಂದಲ್ಲ, ಯಾವುದೇ ಬದಲಾವಣೆಯ ಕೆಲಸ ವ್ಯಾವಹಾರಿಕ ಅಗತ್ಯಗಳೊಂದಿಗೇ ಶುರು ಆಗಬೇಕಾಗಬಹುದು. ಇದರೊಂದಿಗೇ ಕಾರ್ಯತಂತ್ರ ಆಸಕ್ತಿಗಳ ಬಗ್ಗೆ ಸದಾ ಎಚ್ಚರಿಕೆ ಇರಬೇಕಾಗಿರುವುದು ಅಗತ್ಯ.

**ಗಮನಿಸಬೇಕಾದ ಮತ್ತೊಂದು ಅಂಶವಿದೆ :** ನೀರು ಒಂದು ವ್ಯಾವಹಾರಿಕ ಅಗತ್ಯವಾಗಿದೆ. ಆ ಊರಿಗೆ ಸರಕಾರ ಅಥವಾ ಅಧಿಕಾರಿಗಳು ನೀರಿನ ವ್ಯವಸ್ಥೆ ಮಾಡಿಕೊಡಬಹುದು. ಎಲ್ಲಿ ಯಾವಾಗ, ಹೇಗೆ ಎಂಬುದನ್ನು ಮಹಿಳೆಯರೊಂದಿಗೆ ಮಾತು ಕೂಡಾ ಆಡಿರುವುದಿಲ್ಲ - ಇದು ಒಂದು ವಿಧಾನ.

ಮಹಿಳೆಯರಿಗೆ ನೀರು ಇಲ್ಲದೆ ತೊಂದರೆಯಾಗಿದೆ. ಎಲ್ಲರೂ ಜತೆ ಸೇರಿ, ಸಂಘಟಿತರಾಗಿ, ಸರಕಾರದ ಮೇಲೆ ಒತ್ತಡ ಹಾಕಿ, ತಮಗೆ ಬೇಕಾದ ಕಡೆ ನೀರಿನ ವ್ಯವಸ್ಥೆ ಮಾಡಿಕೊಳ್ಳುತ್ತಾರೆ - ಇದು ಇನ್ನೊಂದು ವಿಧಾನ.

ಎರಡು ವಿಧಾನಗಳಲ್ಲೂ ನೀರು ಸಿಕ್ಕಿದೆ. ಆದರೆ ಎರಡನೇ ವಿಧಾನದಲ್ಲಿ ಮಹಿಳೆಯರು ನೀರಿನ ನೆಪದಲ್ಲಿ ಸಂಘಟಿತ

ರಾಗಿರುವುದು, ಆತ್ಮವಿಶ್ವಾಸ ಹೆಚ್ಚಿರುವುದು, ಊರವರ ದೃಷ್ಟಿಯಲ್ಲಿ ಮಹಿಳೆಯರ ಪಾತ್ರ ಬದಲಾಗಿರುವುದು ಎಲ್ಲವೂ ಅವರ ಸ್ಥಾನಮಾನದಲ್ಲೂ ಒಂದು ರೀತಿಯ ಬದಲಾವಣೆ ತಂದಿರುತ್ತದೆ.

ಅಂತೆಯೇ, ಕಾರ್ಯತಂತ್ರ ಆಸಕ್ತಿಗಳಿಗೆ ಸಂಬಂಧಿಸಿದ ಹಾಗೆ ಕೆಲವು ಕಾನೂನುಗಳಿವೆ. ಆಸ್ತಿಯ ಹಕ್ಕು ಇರಬಹುದು, ವರದಕ್ಷಿಣೆ ಕಾನೂನು ಇರಬಹುದು, ಸಮಾನ ವೇತನದ ಕಾನೂನು ಇರಬಹುದು. ಯಾವುದೇ ಇರಲಿ ಮಹಿಳೆಯರನ್ನು ತಲಪುವುದೇ ಬಹಳ ಕಡಿಮೆ.

ಈ ಕಾನೂನುಗಳು ಹುಟ್ಟಿಕೊಳ್ಳುವುದೂ, ಸಂಘಟಿತ ಹೋರಾಟಗಳು ನಡೆದಾಗ ಮಾತ್ರ. ಅಂತೆಯೇ ಈ ಕಾನೂನುಗಳ ಉಪಯೋಗವಾಗುವುದು ಕೂಡಾ ಮಹಿಳೆಯರು ಸಂಘಟಿತರಾಗಿ ಆದರತ್ತ ಕೆಲಸ ಮಾಡಿದಾಗ ಮಾತ್ರ. ಅಂದರೆ ಸ್ಥಾನಮಾನವನ್ನು ನೀಡುವ ಕಾನೂನುಗಳೇ ಆದರೂ, ಅದರಷ್ಟಕ್ಕೇ ಅದು ಮಹಿಳೆಯರಿಗೆ ಸ್ಥಾನಮಾನ ತಂದು ಕೊಡುವುದಿಲ್ಲ.

ಅದಕ್ಕಾಗಿ, ಈ ವ್ಯಾವಹಾರಿಕ ಅಗತ್ಯ ಮತ್ತು ಕಾರ್ಯತಂತ್ರ ಆಸಕ್ತಿಗಳನ್ನು ಈ ಕೆಳಗಿನಂತೆ ವಿಭಾಗಿಸಬಹುದು,

1. ವ್ಯಾವಹಾರಿಕ ಅಗತ್ಯಗಳು (ಸರಕಾರ ಅಥವಾ ಯೋಜನಕಾರರು ಗುರುತಿಸಿ, ಮೇಲಿನಿಂದ ಕೆಳಗೆ ಜಾರಿಗೆ ತರುವುದು)
2. ಕಾರ್ಯತಂತ್ರ ಆಸಕ್ತಿಗಳು (ಸರಕಾರ ಅಥವಾ ಯೋಜನಕಾರರು ಗುರುತಿಸಿ, ಮೇಲಿನಿಂದ ಕೆಳಗೆ ಜಾರಿಗೆ ತರುವುದು)
3. ಕಾರ್ಯತಂತ್ರ ಆಸಕ್ತಿಗಳು (ಮಹಿಳೆಯರೇ ಗುರುತಿಸಿ, ಸಂಘಟಿತರಾಗಿ ಪಡೆದುಕೊಳ್ಳುವುದು)
4. ವ್ಯಾವಹಾರಿಕ ಅಗತ್ಯಗಳು (ಮಹಿಳೆಯರೇ ಗುರುತಿಸಿ, ಸಂಘಟಿತರಾಗಿ ಪಡೆದುಕೊಳ್ಳುವುದು)

## ಸಶಕ್ತತೆ

ಸಂಪನ್ಮೂಲಗಳನ್ನು ಗುರುತಿಸಿದ್ದೇವೆ. ಈ ಸಂಪನ್ಮೂಲಗಳು ನಮಗೆ ಎಟುಕದೇ ಹೋದಾಗ, ಅವುಗಳ ಮೇಲೆ ನಮಗೆ ನಿಯಂತ್ರಣ ಇಲ್ಲದೇ ಹೋದಾಗ ನಮಗೆ ಅಸಹಾಯಕತೆ ಅನಿಸುತ್ತದೆ. ಶಕ್ತಿ ಇಲ್ಲದ ಹಾಗೆ ಅನಿಸುತ್ತದೆ. ಈ ಸಂಪನ್ಮೂಲಗಳ ಮೇಲೆ ಅಧಿಕಾರ ಸಿಕ್ಕಿದಾಗ ಶಕ್ತಿ ಇರುವ ಹಾಗೆ ಅನಿಸುತ್ತದೆ.

ಅಂದರೆ ನಮ್ಮ ಸಂಪನ್ಮೂಲಗಳ ಮೇಲೆ ನಮಗೆ ಅಧಿಕಾರ ಸಿಕ್ಕಿದರೆ ಅದನ್ನೇ 'ಸಶಕ್ತತೆ' ಎಂದು ಹೇಳಬಹುದು.

* ಸಶಕ್ತತೆ ಅಂದರೆ ದಬ್ಬಾಳಿಕೆ ಅಲ್ಲ ಎಂಬುದನ್ನು ನೆನಪಿಡಬೇಕು. ಸಂಪನ್ಮೂಲಗಳ ಮೇಲೆ ಕೆಲವೇ ಕೆಲವರ ಅಧಿಕಾರ ಇರುವುದರ ಬದಲು ಸಾಮೂಹಿಕವಾಗಿ ಅಧಿಕಾರ ಪಡೆದುಕೊಳ್ಳುವುದು ಆಗಬೇಕು. ಪಿತೃಪ್ರಧಾನ ಸಮಾಜದಲ್ಲಿರುವ ಅಧಿಕಾರದ ಮಾದರಿಯನ್ನೇ ಅನುಸರಿಸಿದರೆ ಅದು ಸಶಕ್ತತೆ ಆಗುವುದಿಲ್ಲ.

* ಸಶಕ್ತತೆ ಒಂದು ಪ್ರಕ್ರಿಯೆಯೂ ಹೌದು, ಒಂದು ಗುರಿಯೂ ಹೌದು. ಈ ಪ್ರಕ್ರಿಯೆ ಶುರುವಾಗುವುದು ಮನಸ್ಸಿನಲ್ಲಿ, ಮಹಿಳೆಯರು ತಮ್ಮ ಬಗೆಗಿನ ಕೀಳರಿಮೆ ತೊರೆದು, ಸಾಮರ್ಥ್ಯಗಳನ್ನು, ಹಕ್ಕುಗಳನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ತಮ್ಮ ಘನತೆಯನ್ನು, ಸ್ಥಾನಮಾನವನ್ನು, ಬೇರೆಯವರು ತಂದುಕೊಡುವುದಿಲ್ಲ. ಅದಕ್ಕಾಗಿ ವೈಯಕ್ತಿಕ ಶ್ರಮ ಮತ್ತು ಸಾಮೂಹಿಕ ಕೆಲಸ ಬೇಕಾಗುತ್ತದೆ.

* ಪಿತೃಪ್ರಧಾನ ಯೋಚನೆಯನ್ನೇ ಪ್ರತಿಪಾದಿಸುವ ಶಿಕ್ಷಣ, ಮಾಧ್ಯಮ, ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಹಾಗೂ ಕೌಟುಂಬಿಕ ರಚನೆಗಳ ಒಳಗೆ ಮಹಿಳೆಯರು ನಿರ್ಧಾರ ತೆಗೆದುಕೊಳ್ಳುವ ಅವಕಾಶ ಪಡೆಯಬೇಕಾಗುತ್ತದೆ. ಇಲ್ಲಿ ಮಹಿಳೆ ಪುರುಷರಿಬ್ಬರಿಗೂ ಒಳಿತಾಗುವಂತಹ ಹೊಸ ಆಲೋಚನೆಯನ್ನು ಬಿತ್ತಬೇಕಾಗುತ್ತದೆ.

* ಸಶಕ್ತತೆಯ ಪ್ರಕ್ರಿಯೆ ಪುರುಷ ವಿರೋಧಿಯಲ್ಲ. ಲಿಂಗತ್ವದ ಬಂಧನದಿಂದ ಮಹಿಳೆ, ಪುರುಷರಿಬ್ಬರಿಗೂ ಬಿಡುಗಡೆ ಸಿಗಬೇಕು. ಮುಕ್ತವಾಗಿ ಹೆಚ್ಚಿನ ಸಾಮರಸ್ಯದಿಂದ ಬದುಕುವ ಒಂದು ಸ್ಥಿತಿಯೇ ಸಶಕ್ತತೆಯ ಪ್ರಕ್ರಿಯೆಯ ಆಶಯವಾಗಿದೆ.

* ಮಹಿಳಾ ಸಶಕ್ತತೆಯ ಪ್ರಕ್ರಿಯೆ ಒಂದು ಸಾಮೂಹಿಕ ಕ್ರಿಯೆಯೂ ಹೌದು, ವ್ಯಕ್ತಿಗತ ಹೋರಾಟವೂ ಹೌದು. ಪರಸ್ಪರ ಬೆಂಬಲದೊಂದಿಗೆ ಇದು ನಡೆಯುವುದು. ಈ ಹೋರಾಟ, ಏಕರೂಪಿಯಲ್ಲ, ಎಲ್ಲರೂ ಒಂದೇ ರೀತಿ ಹೋರಾಡಬೇಕಿಲ್ಲ, ಮಹಿಳೆಯರಿಗೆ ಸಿಗುವ ಸಮಯ ಮತ್ತು ಅವಕಾಶದಲ್ಲಿ ಅವರು 'ತಮ್ಮದೇ ಆದ' ನಿರ್ಧಾರಕ್ಕೆ ಬರುವುದು ಅಗತ್ಯ. ವೈವಿಧ್ಯಮಯವಾದ ಕಾರ್ಯತಂತ್ರಗಳು ಇದರಲ್ಲಿ ಇರಬಹುದು.

ಅತ್ಯಂತ ವಿಶಾಲವಾದ ನೆಲೆಯಲ್ಲಿ ಮಹಿಳಾ ಸಶಕ್ತತತೆಯನ್ನು ನಾವು ಅರ್ಥಮಾಡಿಕೊಳ್ಳಬೇಕಾಗಿದೆ. ಇತರರ ದಬ್ಬಾಳಿಕೆಗೆ ತಾನು ಒಳಗಾಗುವುದಿಲ್ಲ, ಇತರರ ಮೇಲೆ ತಾನು ದಬ್ಬಾಳಿಕೆ ನಡೆಸುವುದೂ ಇಲ್ಲ ಎಂಬ ಸ್ಥಿತಿ ಸಶಕ್ತತೆಯ ಒಂದು ಸ್ವರೂಪವಿರಬಹುದು !

(ವಿವಿಧ ಮೂಲಗಳಿಂದ)

# ಬಾವಿ ನೀರು ಕೇರಿಗೆ

10 ವಿಷಯ : ವಸ್ತು ಸಂಪನ್ಮೂಲದ ಮೇಲೆ ನಿಯಂತ್ರಣ

**ಕನಿಷ್ಟ ಸಮಯ :**

30 ನಿ.

**ತಯಾರಿ :**

'ಬಾವಿ ನೀರು ಕೇರಿಗೆ' ಪ್ರಕರಣವನ್ನು ತರಬೇತಿಗೆ ಮುಂಚಿತವಾಗಿಯೇ ಓದಿ ಕೊಂಡಿರಬೇಕು.

**ಆಡಕ :**

'ಬಾವಿ ನೀರು ಕೇರಿಗೆ' ಪುಟ - 29

**ಉದ್ದೇಶ :**

* ಊರಿನಲ್ಲಿರುವ, ನ್ಯಾಯಯುತವಾಗಿ ಎಲ್ಲರಿಗೆ ಸೇರಬೇಕಾಗಿರುವ ಬಾವಿನೀರನ್ನು (ವಸ್ತು ಸಂಪನ್ಮೂಲ) ಮಹಿಳೆಯರು ಪಡೆಯಬಲ್ಲರು ಎಂಬುದನ್ನು ಅರ್ಥ ಮಾಡಿಕೊಳ್ಳುವುದು.
* ಈ ಪ್ರಕ್ರಿಯೆಯಿಂದ ಮಹಿಳೆಯರ ಬದುಕಿನಲ್ಲಿ ಆಗುವ ಬದಲಾವಣೆಯನ್ನು ಗುರುತಿಸುವುದು.

**ಚಟುವಟಿಕೆ :**

* 'ಬಾವಿ ನೀರು ಕೇರಿಗೆ' - ಪ್ರಕರಣವನ್ನು ಮಹಿಳೆಯರಿಗೆ, ಕತೆ ಹೇಳುವಂತೆ ವಿವರಿಸಿ ಹೇಳಿ.
* ಮೊದಲಿಗೆ ಅವರ ಪ್ರತಿಕ್ರಿಯೆಗಳನ್ನು ಕೇಳಿ ತಿಳಿದುಕೊಂಡು ಆ ವಿಚಾರಗಳನ್ನು ಚರ್ಚಿಸಿ
* ನೀರು ಇಲ್ಲದ ಪರಿಸ್ಥಿತಿ ಹೇಗಿತ್ತು, ನೀರು ಪಡೆದ ರೀತಿ ಹೇಗೆ, ಒಂಟಿಯಾಗಿಯೇ ಸಾಮೂಹಿಕವಾಗಿಯೇ, ಇದರಲ್ಲಿ ಅವರು ಯಾವ ಸಂಪನ್ಮೂಲದ ಮೇಲೆ ಅಧಿಕಾರ ಪಡೆದರು, ಇದರಿಂದ ಅವರ ಪರಿಸ್ಥಿತಿ ಮತ್ತು ಸ್ಥಾನಮಾನದಲ್ಲಿ ಯಾವ ರೀತಿ ಬದಲಾವಣೆಯಾಯಿತು - ಈ ವಿಚಾರಗಳನ್ನು ಚರ್ಚಿಸಿ.

**ಗಮನಿಸಬೇಕಾದ ಅಂಶ :**

* ದೊಡ್ಡ ದೊಡ್ಡ ಶಬ್ದಗಳನ್ನು ಉಪಯೋಗಿಸದೆಯೇ - 'ನೀರು' ಒಂದು ಸಂಪನ್ಮೂಲ ಎಂಬುದು ಅರ್ಥವಾಗುವಂತೆ ನೋಡಿಕೊಳ್ಳಿ.

**ನಿರೀಕ್ಷಿತ ಫಲಿತಾಂಶ :**

* ಸಾಮೂಹಿಕವಾಗಿ ಒಂದು ಕೆಲಸಕ್ಕಿಳಿದಾಗ - ಅದಕ್ಕೆ ಬಲ ಬರುತ್ತದೆ. ನ್ಯಾಯಕ್ಕಾಗಿ, ಒಳ್ಳೆಯ ಉದ್ದೇಶಕ್ಕಾಗಿ ಅದನ್ನು ಬಳಸಬಹುದು. ಉದಾ. : ಇಲ್ಲಿ ನೀರು ಪಡೆಯಲು.
* 'ನೀರು' ಪಡೆದಾಗ ಮುಖ್ಯವಾಗಿ ಅವರ ಪರಿಸ್ಥಿತಿಯಲ್ಲಿ ಬದಲಾವಣೆಯಾಗುತ್ತದೆ. ಹೋರಾಡಿ ಪಡೆದ ಕಾರಣ ಅವರ ಸ್ಥಾನಮಾನದಲ್ಲಿ ಕೂಡಾ ಸ್ವಲ್ಪ ಮಟ್ಟಿನ ಬದಲಾವಣೆ ಯಾಗುತ್ತದೆ - ಈ ವಿಚಾರಗಳು ಅರ್ಥವಾಗಬೇಕು.

**ವೈಯಕ್ತಿಕ ಟಿಪ್ಪಣಿ :**

## ಪ್ರಕರಣ

# "ಬಾವಿ ನೀರು ಕೇರಿಗೆ"

ಮಾಟಳ್ಳಿ - ಇದೊಂದು ಸಣ್ಣ ಹಳ್ಳಿ. ಅಲ್ಲಿ ಸರಕಾರಿ ಬಾವಿಗಳೆರಡು ಇದ್ದುವು. ಇಲ್ಲಿಂದ ನೀರು ಸರಬರಾಜು ಮಾಡುವ ವ್ಯವಸ್ಥೆಯೂ ಇತ್ತು. ಆದರೂ ನೀರು ಸಿಗದೆ ಇರುವುದು ಸಾಮಾನ್ಯವಾಗಿತ್ತು. ಇದು ಸಂಘದ ಹೆಂಗಸರಿಗಷ್ಟೇ ಅಲ್ಲ, ಕೆಳವರ್ಗದ ಜನರೆಲ್ಲರಿಗೂ ತೊಂದರೆಯಾಗ್ತಿತ್ತು. ನೀರು ನಿಂತಾಗ, ಬಾವಿ ಹತ್ತಿರ ಹೋಗಿ ನಿಲ್ಲುವುದು, ಮೇಲ್ಜಾತಿಯವರು ನೀರು ತೆಗೆದು ಇವರಿಗೆ ಕೊಡಬೇಕು. ಕೆಲವರು ಕೊಡ್ತಾರೆ, ಕೆಲವರಿಗೆ ಕೆಲಸವಿದೆ ಎಂದು ಹೋಗ್ತಾರೆ. ಆದರೆ ಯಾರೂ ಈ ಕೆಳಜಾತಿಯವರಿಗೆ ನೀರು ತೆಗೆದುಕೊಳ್ಳಲು ಹೇಳುತ್ತಿರಲಿಲ್ಲ. ಇದರಿಂದ ಬೇಸತ್ತ ಜನ ಒಂದು ದಿನ ಗುಂಪು ಸೇರಿ ಚರ್ಚಿಸಿದರು. ಬೇರೆ ಯಾರೂ ಮುಂದೆ ಬರಲು ಹೆದರುತ್ತಿದ್ದು ಯುವಕರು ಮಾತ್ರ ಮುಂದೆ ಬಂದು ನೀರು ಸೇದಲು ತಯಾರಿ ಆದರು.

ಆಗ ಹೆಂಗಸರು, 'ಯುವಕರು ಮಾತ್ರ ಹೋದರೆ ಅಷ್ಟಾಗಿ ಒಳ್ಳೆಯ ಪ್ರತಿಫಲ ಸಿಗುವುದಿಲ್ಲ. ಅವರಿಗೆ ಮಾತಾಡುವುದು ಗೊತ್ತಾಗೊಲ್ಲ. ನಾವೇ ಹೋಗಿ ನೀರು ಸೇದಿ ತರೋಣ' ಎಂದು ರಾತ್ರಿ ಸಭೆಯಲ್ಲಿ ಚರ್ಚಿಸಿ ತೀರ್ಮಾನಕ್ಕೆ ಬಂದರು. ಮಹಿಳೆಯರು ಮಾರನೆ ದಿನ ಮುಂಜಾನೆ ಬಾವಿಕಟ್ಟೆ ಹತ್ತಿ ನೀರು ತುಂಬಿಸಲು ಆರಂಭಿಸಿದಾಗ, ಗ್ರಾಮಸ್ಥರೆಲ್ಲ ಬಂದು ಜಗಳ ಎಲ್ಲ ಆರಂಭಿಸಿದರು. ಹೆಂಗಸರು ಯಾರಿಗೂ ಗಮನ ಕೊಡದೆ ನೀರು ತಂದರು. ಆ ಏರಿಯಾದ ಜನರೆಲ್ಲಾ ಇದಕ್ಕೆ ಸಹಕರಿಸಿದರು. ಗ್ರಾಮ ಪಂಚಾಯತಿ ಅಧ್ಯಕ್ಷರೂ ಹಿಂದೆ ನಿಂತು ಮನಸ್ಸಿಲ್ಲದ ಮನಸ್ಸಿನಿಂದ ಸಹಕರಿಸಿದ್ದರು.

ಪರಿಣಾಮವಾಗಿ ಊರಿನ ಬಾವಿಯಿಂದ ಎಲ್ಲರೂ ನೀರು ತರುತ್ತಾರೆ.



# ಕಾಯಿ - ಪಲ್ಯೆ ಮಾರಾಟ

11 ವಿಷಯ : ಆರ್ಥಿಕ ಸಂಪನ್ಮೂಲದ ಮೇಲೆ ನಿಯಂತ್ರಣ

ಕನಿಷ್ಠ ಸಮಯ :

30 ನಿ.

ತಯಾರಿ :

ತರಬೇತಿಗೆ ಮುಂಚಿತವಾಗಿ ಪ್ರಕರಣವನ್ನು ಸರಾಗವಾಗಿ ಓದಲು ಅಭ್ಯಾಸ ಮಾಡಿರಿ.

ಮಹಿಳಾ ಸಮಖ್ಯಾ ತಯಾರಿಸಿದ ಇ.ಡಿ.ಪಿ. ಪ್ರೈಮರನ್ನು ಓದಿಕೊಳ್ಳಬಹುದು.

ಆಡಕ :

'ಕಾಯಿ ಪಲ್ಯೆ ಮಾರಾಟ' ಪುಟ-31

## ಉದ್ದೇಶ :

* ಮಹಿಳೆಯರು ಆರ್ಥಿಕ ಸಂಪನ್ಮೂಲದ ಮೇಲೆ ನಿಯಂತ್ರಣ ಪಡೆಯುವ ಒಂದು ಸರಳ ಸಾಧ್ಯತೆಯನ್ನು ಅರ್ಥಮಾಡಿಕೊಳ್ಳುವುದು.
* ಈ ಪ್ರಕ್ರಿಯೆಯ ಪರಿಣಾಮವನ್ನು ಗುರುತಿಸುವುದು.

## ಚಟುವಟಿಕೆ :

* ಈ ಪ್ರಕರಣವನ್ನು ಅರ್ಥಪೂರ್ಣವಾಗಿ ಓದಿ ಹೇಳಿ.
* ಮಹಿಳೆಯರಿಗೆ ಪ್ರತಿಕ್ರಿಯಿಸುವಂತೆ ಹೇಳಿ. ಚರ್ಚೆ ಮಾಡಿ. ಚರ್ಚೆಯಲ್ಲಿ ಆರ್ಥಿಕ ಸಂಪನ್ಮೂಲದ ಮೇಲೆ ಮಹಿಳೆಯರು ಹೇಗೆ ನಿಯಂತ್ರಣ ಪಡೆದರು, ಇದರಿಂದ ಯಾವ ರೀತಿಯಲ್ಲಿ ಬದಲಾವಣೆಯಾಯಿತು, ಇಲ್ಲಿ ಕಂಡು ಬರುವ ಬೇರೆ ಸಂಪನ್ಮೂಲಗಳು (ಉದಾ. : ಮಾಹಿತಿ, ಅವಕಾಶ, ಚಲನಶೀಲತೆ, ಹೊಸ ಆಲೋಚನೆ...) ಯಾವುವು?

- ಈ ಎಲ್ಲಾ ಅಂಶಗಳೊಂದಿಗೆ ಚರ್ಚೆ ಮಾಡಿ.

## ಗಮನಿಸಬೇಕಾದ ಅಂಶ :

* ಆರ್ಥಿಕ ಸಂಪನ್ಮೂಲದ ಮೇಲೆ ಅಧಿಕಾರಕ್ಕೆ ಈ ಪ್ರಕರಣ ಒಂದು ಸಣ್ಣ ಉದಾಹರಣೆ ಅಷ್ಟೆ ಎಂಬುದು ನಿಮಗೆ ನೆನಪಿರಲಿ. ಈ ವಿಚಾರ ತುಂಬಾ ವಿಶಾಲವಾಗಿದೆ. ಈ ಘಟನೆಯಲ್ಲಿ ನಡೆದಷ್ಟು ಸಾಧಿಸಿದ ತಕ್ಷಣ - ಆರ್ಥಿಕ ಸಂಪನ್ಮೂಲದ ಮೇಲೆ ಎಲ್ಲಾ ಅಧಿಕಾರ ಬಂತು ಎಂದು ಅರ್ಥವಲ್ಲ.

## ನಿರೀಕ್ಷಿತ ಫಲಿತಾಂಶ :

* ಹಣ (ಆರ್ಥಿಕ ಅಂಶ) ಎಂಬುದು ಮುಖ್ಯವಾಗಿ ಪರಿಸ್ಥಿತಿಯನ್ನು ಬದಲಾಯಿಸುತ್ತದೆ, ಎಂಬುದು ಅರ್ಥವಾಗಬೇಕು.
* ಹಣ ಸಂಪಾದನೆ ಒಂದು ವಿಚಾರವಾದರೆ, ಹಣದ ಉಪಯೋಗ ಯಾರು ಹೇಳಿದಂತೆ ಆಗುತ್ತದೆ ಎಂಬುದು ಕೂಡಾ ಒಂದು ಮುಖ್ಯ ಅಂಶ ಎಂಬುದು ಅರ್ಥವಾಗಬೇಕು.

## ವೈಯಕ್ತಿಕ ಟಿಪ್ಪಣಿ :

ಪ್ರಕರಣ

# ಕಾಯಿ - ಪಲ್ಯೆ ಮಾರಾಟ

ಒಡಿಲ್ನಾಳ ಹಳ್ಳಿಯ ಮಹಿಳಾ ಸಂಘದಲ್ಲಿರುವ 5 ಜನ ಮಹಿಳೆಯರು ಸಂಘಕ್ಕೆ ಸೇರುವ ಮೊದಲು ಎಲ್ಲ ಮಹಿಳೆಯರಂತೆ ತಮ್ಮ ಮನೆಗೆಲಸಗಳನ್ನಷ್ಟೇ ಮಾಡಿಕೊಂಡಿದ್ದು ವಾರಕ್ಕೊಮ್ಮೆ ಸಂಘ ಸಭೆಗೆ ಹಾಜರಾಗುತ್ತಿದ್ದರು.

"ಮಹಿಳಾ ಸಮಖ್ಯಾದವರು ನೀಡುವ ಮಾಹಿತಿ ಅಥವಾ ತರಬೇತಿಗಳ ಆಧಾರದ ಮೇಲೆ ಬೇರೆ ಬೇರೆ ಸಂಘಗಳಿಗೆ ಭೇಟಿ ಕೊಟ್ಟು ಅಲ್ಲಿನ ಚಟುವಟಿಕೆಗಳ ಬಗ್ಗೆ ಹೆಚ್ಚಿನ ಮಾಹಿತಿ ಪಡೆದುಕೊಂಡೆವು. ಜೊತೆಗೆ ಸಣ್ಣ ಪ್ರಮಾಣದ ಉಳಿತಾಯ ಮಾಡಲು ಪ್ರಾರಂಭಿಸಿದೆವು. ಬರೀ ಉಳಿತಾಯ ಮಾಡಿ ಹಣವನ್ನು ನಮ್ಮಲ್ಲಿ ಇಟ್ಟುಕೊಂಡರೆ ಏನು ಲಾಭ ಇಲ್ಲ. ಗಂಟು ಬೆಳೆಯಂಗಿಲ್ಲ. ಏನಾದ್ರೂ ವ್ಯಾಪಾರ ಮಾಡಬೇಕು ಅಂತ ಚರ್ಚೆ ಮಾಡಿದೆವು. ನೀರಾವರಿ ಪ್ರದೇಶವಾದ್ದರಿಂದ ಸಾಕಷ್ಟು ಕಾಯಿಪಲ್ಯೆ ಇಲ್ಲೇನೆ ಬೆಳೆಯುತ್ತದೆ. ಕಡಿಮೆ ದುಡ್ಡಿನೊಳಗೆ ಸಿಗುತ್ತದೆ. ಇದನ್ನು ಮಾರಿದ್ರೆ ಲಾಭ ಆಗಬಹುದು ಅಂತ ನಿರ್ಧರಿಸಿ ಸಂಘದಿಂದ ಸ್ವಲ್ಪ ಹಣ ಸಾಲ ಪಡೆದು ಅಕ್ಕಪಕ್ಕದ ಹಳ್ಳಿಗಳಲ್ಲಿ ತರಕಾರಿ ವ್ಯಾಪಾರ ಮಾಡಲು ಪ್ರಾರಂಭಿಸಿದೆವು. ಹೀಗೇನೇ ಮಾಡ್ತಾ ಹೆಚ್ಚಿನ ಧೈರ್ಯ ಬಂತು. ಹೆಚ್ಚಿನ ವ್ಯಾಪಾರ ಮಾಡಬೇಕೆಂದು ಇನ್ನೂ ಜಾಸ್ತಿ ಹಣ ಸಂಘದಿಂದಲೇ ತೆಗೆದುಕೊಂಡು ಈಗ ದೊಡ್ಡದಾಗಿ ನಡೆಯುವ ಕನೂರು ಸಂತೆಗೆಲ್ಲ ಹೋಗಿ ಸಾಕಷ್ಟು ಲಾಭ ಪಡೆಯುತ್ತೇವೆ. ಹೀಗೆ ಸಂತೆಗೆ ಹೋಗುವಾಗ ಚಪ್ಪಲಿ ಹಾಕಿಕೊಂಡು ಹೋಗುವುದನ್ನು ನೋಡಿ ಗ್ರಾಮದ ಗಂಡಸರು ಇವರೇನು ಮೇಡಂಗಳಾಗಲಿಕ್ಕೆ ಹೊರಟಿದ್ದಾರಲ್ಲಾ ಎಂದು ನಗಾಡುತ್ತಿದ್ದರು. ಇದನ್ನೆಲ್ಲ ನಾವು ತಲೆಗೆ ಹಾಕಿಕೊಳ್ಳಲಿಲ್ಲ. ನಾವು ಮುಂದೆ ಬರ್ತೀವಿ ಅಂತ ಹೊಟ್ಟೆಕಿಚ್ಚುಪಡ್ತಾರೆ, ಅಂತ ನಾವು ಅವರು ಅಂದ ಮಾತು ಕಿವಿಗೆ ಹಾಕಿಕೊಳ್ಳಿಲ್ಲ. ಆದರೆ ಈಗ ಅದೆ ಗಂಡಸರು ಮತ್ತು ಇತರ ಗ್ರಾಮಸ್ಥರು ನಮಗೂ ಇತರ ಸಂಘದ ಮಹಿಳೆಯರಿಗೆ ಹೆಚ್ಚಿನ ಗೌರವ ಕೊಡುವುದಲ್ಲದೆ ನಮಗೆ ಸಹಾಯ ಕೂಡಾ ಮಾಡ್ತಾರೆ".



# ಹೆಚ್ಚಿನ ಕೂಲಿ

12 ವಿಷಯ : ಮಹಿಳೆಯರ ಶ್ರಮದ ಮೇಲೆ ನಿಯಂತ್ರಣ

**ಕನಿಷ್ಠ ಸಮಯ :**

30 ನಿ.

**ತಯಾರಿ :**

* ನಿಮ್ಮ ಪ್ರದೇಶದಲ್ಲಿ ಮಹಿಳೆಯರಿಗೆ, ಪುರುಷರಿಗೆ ಯಾವ ಯಾವ ಕೆಲಸಕ್ಕೆ ಎಷ್ಟು ವೇತನ ಸಿಗುತ್ತದೆ ಮುಂಚಿತವಾಗಿ ತಿಳಿದು ಕೊಂಡಿರಿ.
* ಹೆಚ್ಚು ಕೂಲಿ ಸಿಗುವ ಪ್ರದೇಶಗಳ ಬಗ್ಗೆ ತಿಳಿದುಕೊಳ್ಳಿ.
* ಸಮಾನ ವೇತನ, ಕನಿಷ್ಠ ವೇತನ, ಕಾನೂನಿನ ಬಗ್ಗೆ ಮಾಹಿತಿ ತಿಳಿದು ಕೊಂಡಿರಿ.

**ಅಡಕ :**

'ಹೆಚ್ಚಿನ ಕೂಲಿ' ಪುಟ - 35

**ಉದ್ದೇಶ :**

* ಸ್ವಂತ ಶ್ರಮ ಕೂಡಾ ಒಂದು ಸಂಪನ್ಮೂಲ. ಅದರ ಮೇಲೆ ಇತರರು ಹೇಗೆ ಅಧಿಕಾರ ಚಲಾಯಿಸುತ್ತಾರೆ. ಎಂಬುದನ್ನು ಅರ್ಥಮಾಡಿಕೊಳ್ಳುವುದು.
* ಸ್ವಂತ ಶ್ರಮದ ಮೇಲೆ ತಾವೇ ಅಧಿಕಾರ ಪಡೆಯುವ ಪ್ರಕ್ರಿಯೆ ತಿಳಿದುಕೊಳ್ಳುವುದು.

**ಚಟುವಟಿಕೆ :**

* ಕುರವಟ್ಟಿಯ ಮಹಿಳೆಯರ ಪ್ರಕರಣವನ್ನು ವಿವರಿಸಿ ಹೇಳಿ - ಪ್ರತಿಕ್ರಿಯೆ ಕೇಳಿ - ಚರ್ಚೆ ನಡೆಸಿ.-
* ಚರ್ಚೆಯಲ್ಲಿ ಶ್ರಮ ಒಂದು ಸಂಪನ್ಮೂಲ. ಅದು ಸ್ವಂತ ಸಂಪನ್ಮೂಲ. ಅದರ ಮೇಲೆಯೂ ಮಹಿಳೆಯರಿಗೆ ಅಧಿಕಾರವಿಲ್ಲ. ಮಹಿಳೆಯರು ಮನೆಯಲ್ಲಿ ವೇತನವಿಲ್ಲದೆ ಶ್ರಮ ಹಾಕುತ್ತಾರೆ, ಹೊರಗೆ ಕಡಿಮೆ ವೇತನಕ್ಕೆ ಶ್ರಮ ಹಾಕುತ್ತಾರೆ. ಅವರ ದುಡಿತಕ್ಕೆ ಬೆಲೆ ಇಲ್ಲ ಎಂಬ ಅಂಶಗಳು ಬರಲಿ.
* ಒಂದೇ ರೀತಿಯ ಶ್ರಮ ಹಾಕಿದಾಗಲೂ ಗಂಡಸರಿಗೆ ಸಿಗುವ ಕೂಲಿಯಷ್ಟು ಹೆಂಗಸರಿಗೆ ಸಿಗುವುದಿಲ್ಲ ಎಂಬುದನ್ನು ಚರ್ಚಿಸಿ.
* ಪ್ರಾದೇಶಿಕ ವೇತನದ ಪದ್ಧತಿ, ಸಮಾನ ವೇತನ, ಕನಿಷ್ಠ ವೇತನ, ಕಾನೂನುಗಳ ಬಗ್ಗೆ ಸ್ವಲ್ಪ ಮಾಹಿತಿ ಕೊಡಿ.

**ಗಮನಿಸಬೇಕಾದ ಅಂಶ :**

* ಸಮಸ್ಯೆ ಅಗಾಧವಾದದ್ದು, ಜಾಗತಿಕವಾದದ್ದು ಎಂಬುದು ನಿಮಗೆ ನೆನಪಿರಲಿ.

**ನಿರೀಕ್ಷಿತ ಫಲಿತಾಂಶ :**

* ಮಹಿಳೆಯರಿಗೆ ತಮ್ಮದೇ ದುಡಿತದ (ಶ್ರಮದ) ಮೇಲೆ ತಮಗೇ ಅಧಿಕಾರ ಇಲ್ಲ. ಅವರ ಇಚ್ಛೆಯಂತೆ ಅದನ್ನು ಬಳಸುವುದಕ್ಕಾಗುವುದಿಲ್ಲ ಎಂಬ ವಿಚಾರ ಮನವರಿಕೆಯಾಗಬೇಕು.
* ಮಹಿಳೆಯರು ತಮ್ಮ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವುದಕ್ಕೆ ಸಂಪನ್ಮೂಲಗಳನ್ನು ತಲಪುವುದು ಮತ್ತು ಅವುಗಳನ್ನು ಉಪಯೋಗಿಸುವುದಕ್ಕೆ ಈ ಹಿಂದಿನ ಎಲ್ಲಾ ಪ್ರಕರಣಗಳು ಉದಾಹರಣೆಗಳಾಗಿವೆ. ನೀರು, ಆರ್ಥಿಕ ವಿಚಾರ, ಆದಾಯ, ಸಮಾನ ವೇತನ ಇವೆಲ್ಲವುಗಳಲ್ಲೂ ಮಹಿಳೆಯರು ಹಣವನ್ನು ಪಡೆಯುವುದರೊಂದಿಗೆ ಒಂದು ಹೊಸ ಗುರುತನ್ನು ಮತ್ತು ಸಮಾನತೆಯನ್ನು ಪಡೆಯಲು ಸಾಧ್ಯವಾಗಿರುವುದು ಕಂಡು ಬರುತ್ತದೆ.

**ವೈಯಕ್ತಿಕ ಟಿಪ್ಪಣಿ :**

ಪ್ರಕರಣ

# "ಹೆಚ್ಚಿನ ಕೂಲಿ"

ಕುರವಟ್ಟಿಯ ಮಹಿಳೆಯರು ದಿನಕ್ಕೆ ರೂ. 10 ಕೂಲಿ ಪಡೆಯುತ್ತಿದ್ದರು. ಹೆಚ್ಚಿಗೆ ಮಾಡುವಂತೆ ಎಷ್ಟೋ ಜನಕ್ಕೆ ಕೇಳಿದರೂ ಮಾಡಲಿಲ್ಲ, ಅದೇ ಕೂಲಿಗೆ ಶ್ರೀಮಂತರ ಹೊಲಗಳಲ್ಲಿ ಕೆಲಸ ಮಾಡ್ತಿದ್ರು, ಅರ್ಧಂಬರ್ಧ ಕೆಲಸವಾಗಿತ್ತು. ಅದೇ ಸಮಯದಲ್ಲಿ ಸ್ವಲ್ಪ ಬಡಮನೆತನದವನೇ, ತನ್ನ ಹೊಲದಲ್ಲಿ ಹುಲ್ಲು ಬೆಳೆದು ಬೆಳೆ ಹಾಳಾಗುತ್ತಿರುವುದರಿಂದ, ಸಂಘದ ಹೆಂಗಸರನ್ನು ಕೂಲಿಗೆ ಕರೆದ. ಇದೇ ಸಂದರ್ಭ ಉಪಯೋಗಿಸಿಕೊಂಡು ಸಂಘದ ಹೆಂಗಸರು, 5 ರೂಪಾಯಿ ಹೆಚ್ಚಿನ ಕೂಲಿಗೆ ಬರುತ್ತೇವೆ ಎಂದರು. ಆತ ಒಪ್ಪಿಕೊಂಡು, ಕೆಲಸಕ್ಕೆ ಕರೆದನು.

ಇತರ ಶ್ರೀಮಂತ ಹೊಲದೊಡೆಯರಿಗೆ ಸಿಟ್ಟು ಬಂತು. ಹೆಂಗಸರಿಗೆ ಬೈಯ್ಯಲು ಬಂದರು. ಹೆಂಗಸರು, ಕೂಲಿ ಹೆಚ್ಚಿಗೆ ಕೊಟ್ಟರೆ ಬರುತ್ತೇವೆ ಎಂದು ಹೇಳಿದರು. ಶ್ರೀಮಂತರೆಲ್ಲಾ ಸೇರಿ ಹೆಚ್ಚಿಗೆ ಕೂಲಿ ಕೊಟ್ಟವನನ್ನೂ ಕರೆಸಿ ಪಂಚಾಯ್ತಿ ನಡೆಸಿದರು. ಪಂಚಾಯ್ತಿಯಲ್ಲಿ ಹೆಚ್ಚೇನೂ ನಡೆಯಲಿಲ್ಲ, ಎಲ್ಲರೂ ದಿನಕ್ಕೆ ರೂ. 15, ಕೂಲಿ ಕೊಡಲಾರಂಭಿಸಿದರು.

"ಇದೊಂದು ಕೆಲಸದ ಸಮಯ ಹೋದರೆ, ನಮಗೆ ಕೂಲಿ ಎಲ್ಲಿ ಎಷ್ಟು ಸಿಗುತ್ತದೆ. ಇಂತ ಸಮಯಕ್ಕಾದರೂ ಒಳ್ಳೆ ಕೂಲಿ ಸಿಗಬೇಕು" ಅಂತ ಮಹಿಳೆಯರು ಹೇಳ್ತಾರೆ.



# ಸಾರಾಯಿ ಸಮಸ್ಯೆ

13 ವಿಷಯ : ಮಹಿಳೆಯರ ಮೇಲೆ ಸಾರಾಯಿ/ಕುಡಿತದಿಂದ ಹಿಂಸೆ

**ಕನಿಷ್ಠ ಸಮಯ :**

30 ನಿ.

**ತಯಾರಿ :**

ಪ್ರಕರಣವನ್ನು ಮುಂಚಿತವಾಗಿ ಓದಿ ಕೊಂಡಿರಿ.

* ಸಾರಾಯಿ ಬಾಟ್ಲಿ ಬಗ್ಗೆ, ನಿಮ್ಮ ಪ್ರದೇಶದಲ್ಲಿ ಅದರ ವ್ಯವಹಾರದ ಬಗ್ಗೆ ತಿಳಿದುಕೊಂಡಿರಿ.
* ಸಾರಾಯಿ ಅಂಗಡಿ ಓಡಿಸಿದ ಇನ್ನು ಕೆಲವು ಉದಾಹರಣೆ ನಿಮ್ಮ ಬಳಿ ಇರಲಿ.

**ಅಡಕ :**

'ಸಾರಾಯಿ ಸಮಸ್ಯೆ' ಪುಟ - 33

**ಉದ್ದೇಶ :**

* ಕುಡಿತದಿಂದ ಮಹಿಳೆಯರ ಮೇಲೆ ಆಗುವ ಹಿಂಸೆಯನ್ನು ವಿಶ್ಲೇಷಣೆ ಮಾಡುವುದು.

**ಚಟುವಟಿಕೆ :**

* ಇದರ ಒಂದು ಭಾಗವನ್ನು ಮಾತ್ರವೇ ಓದಿ ಹೇಳಿ. ಈ ಸಮಸ್ಯೆಯನ್ನು ತಾವು ಅನುಭವಿಸಿರುವ ಸಂದರ್ಭಗಳನ್ನು ಮಹಿಳೆಯರು ವಿವರಿಸಲಿ

  ಹಾಗೂ

  ಮುಖ್ಯವಾಗಿ ಈ ಸಮಸ್ಯೆಯನ್ನು ಹೇಗೆ ನಿಭಾಯಿಸಬಹುದು ಅದರಿಂದ ಏನಾಗಬಹುದು ಎಂಬುದನ್ನು ಮಹಿಳೆಯರು ಕಲ್ಪಿಸಿಕೊಂಡು ಹೇಳಲಿ. ಚರ್ಚೆ ನಡೆಯಲಿ.
* ಆಮೇಲೆ ಮುಂದಿನ ಭಾಗವನ್ನು ನೀವು ಓದಿ ಹೇಳಿ ಆ ಬಗ್ಗೆ ಮತ್ತೆ ಚರ್ಚೆ ನಡೆಯಲಿ.

  ಮುಖ್ಯವಾಗಿ ಈ ಕುಡಿತದ ಸಮಸ್ಯೆ - ಹೇಗೆ ಮಹಿಳೆಯ ಆರ್ಥಿಕ ಅಧಿಕಾರ, ಲೈಂಗಿಕತೆ, ಮನೆ - ವ್ಯವಹಾರಗಳಲ್ಲಿ ತೊಂದರೆ ಮಾಡುತ್ತದೆ ಎಂಬುದರ ಕಡೆಗೆ ಚರ್ಚೆ ಇರಲಿ. ಅಷ್ಟೇ ಅಲ್ಲ ಈ ಸಮಸ್ಯೆ ತುಂಬಾ ಅಗಾಧವಾದುದು - ಇದರಲ್ಲಿ ಇಡೀ ವ್ಯವಸ್ಥೆಯೇ (ಸರಕಾರವೂ) ಭಾಗಿಯಾಗಿದೆ ಎಂಬ ವಿಚಾರ ಬರಲಿ.

**ಗಮನಿಸಬೇಕಾದ ಅಂಶ :**

* ಕುಡಿತದ ಸಮಸ್ಯೆ ಮಹಿಳೆಯರಿಗೆ ಹೊಸತಲ್ಲ, ಅದು ನೆನಪಿರಲಿ. ಈ ಸಮಸ್ಯೆಗೆ ಸಂಬಂಧಿಸಿದಂತೆ - ವಿಚಾರ ಮಾಡುವುದಕ್ಕೆ ಮತ್ತು ಹೊಸ ಆಲೋಚನೆಗೆ ತೊಡಗುವುದಕ್ಕೆ ನೀವು ಸಹಕರಿಸಬೇಕು.
* ಸಾರಾಯಿ ಹೋರಾಟದಲ್ಲಿ ಒಮ್ಮೆ ಜೋರಾಗಿ ಭಾಗವಹಿಸಿ, ಆಮೇಲೆ ಸೋತು ಹೋದ ಅನುಭವಗಳೂ ಅನೇಕ ಇರಬಹುದು. ನಿರಾಶೆಯಾಗದಂತೆ ನೋಡಿಕೊಳ್ಳಿ. ಸಮಸ್ಯೆ ಪರಿಹಾರಕ್ಕೆ ಹೊಸದಾರಿಗಳೇನಾದರೂ ಇರಬಹುದೇ ಎಂಬುದರ ಕಡೆಗೆ ಗಮನವಿರಲಿ.

**ನಿರೀಕ್ಷಿತ ಫಲಿತಾಂಶ :**

* ಈ ಸಮಸ್ಯೆಯ ವಿರುದ್ಧ ವ್ಯಾಪಕವಾದ ಚಳವಳಿಯ ಅಗತ್ಯವಿದೆ. ಆ ನಿಟ್ಟಿನಲ್ಲಿ ಪ್ರತಿಯೊಂದು ಸಂಘವೂ ಕೆಲಸ ಮಾಡಬೇಕಾಗುವುದು - ಎಂಬ ಆಲೋಚನೆ ಗಟ್ಟಿಯಾಗಬೇಕು.
* 'ಕುಡಿತದ' (ಸಾರಾಯಿ ವ್ಯಾಪಾರ) ಹಿಂದಿನ ಜಾಲದ ಒಂದು ಸಣ್ಣ ಪರಿಚಯವಾದರೂ ಸಿಗಬೇಕು.
* ಹೊಸ ಹೋರಾಟದ ದಾರಿಗಳನ್ನು ಹುಡುಕಬೇಕಾಗಿದೆ ಎಂಬ ಆಲೋಚನೆ ಹುಟ್ಟಬೇಕು.

**ವೈಯಕ್ತಿಕ ಟಿಪ್ಪಣಿ :**

## ಪ್ರಕರಣ

# "ಸಾರಾಯಿ ಸಮಸ್ಯೆ"

ಭಾಗ : 1

"ಊರ ಮಧ್ಯೆ ಇರುವ ಸಾರಾಯಿ ಅಂಗಡಿಯಿಂದಾಗಿ ಮಕ್ಕಳೂ, ಹೆಂಗಸರೂ ತಿರುಗಾಡಲಿಕ್ಕಿಲ್ಲ. ಕುಡುಕರ ಕಾಟ ಜಾಸ್ತಿಯಾಗಿದೆ. ದುಡಿದು ತಂದ ಹಣ ಗಂಡಸರು ನೇರ ಸಾರಾಯಿ ಅಂಗಡಿಗೆ ಸುರಿಯುತ್ತಾರೆ. ಕೆಲವು ಮನೆಗಳಲ್ಲಿ ಕುಡಿದು ಬಂದ ಗಂಡ ಹೆಂಡತಿ ಮಕ್ಕಳಿಗೆ ಹೊಡೆಯುವುದು, ಬಡಿಯುವುದು ನೋಡಿ ನೋಡಿ ಸಾಕಾಗಿದೆ. ಅಂಗಡಿ ಮುಚ್ಚಿಸುವುದಕ್ಕೆ ಹೊರಡೋಣವೆಂದರೆ ಯೋಚನೆಯಾಗುತ್ತಿದೆ. ಬೇರೆ ಗಂಡಸರಾದ್ರೆ ಸರಿ. ನಮ್ಮ ಮನೆ ಗಂಡಸರೊಂದಿಗೇ ಜಗಳ ಆಡಬೇಕಲ್ಲಾ ?"

ನಾಗನ ಹಳ್ಳಿಯ ಮಹಿಳಾ ಸಂಘದವರ ಗೋಳು ಇದು. ನೀವು ಏನು ಹೇಳುತ್ತೀರಿ ?

ಭಾಗ : 2

"ಆದರೂ ಧೈರ್ಯ ಮಾಡಿ ಆ ಸಾರಾಯಿ ಅಂಗಡಿ ಯಜಮಾನನಿಗೆ ಅಂಗಡಿ ಮುಚ್ಚಲಿಕ್ಕೆ ಮೂರು ಸಾರಿ ಹೇಳಿದ್ವಿ. ಅವನೇನು ಕಿವಿಗೆ ಹಾಕಿಕೊಳ್ಳಲಿಲ್ಲ. ಮಾರನೇ ದಿನ ಬೆಳಗ್ಗೆ ಅವನು ಅಂಗಡಿಗೆ ಬರೋದ್ರಾಗೆ ಬೀಗ ಜಡಿದು, ಜಮಖಾನ ಹಾಕಿ ಎಲ್ರೂ ಕೂತ್ವಿ" ಅಧಿಕಾರಿಗಳು ಬಂದರು.

'ಇವನ ಅಂಗಡಿಗೆ ಲೈಸೆನ್ಸ್ ಇಲ್ಲ. ಮುಚ್ಚೇವಿ. ನೀವು ಧರಣಿ ಮಾಡಬೇಡಿ. ನಿಮ್ಮ ನಿಮ್ಮ ಮನೆಗೆ ಹೋಗಿ ಅಂದ್ರು'. ಆವತ್ತಿನಿಂದ ಅಂಗಡಿ ಮುಚ್ಚಿ ಹೋಗಿದೆ. ನಮ್ಮ ಗಂಡಂದಿರು ಕುಡಿಯೋದು ನಿಲ್ಸಿದಾರೆ ಅಂತೇನೂ ಇಲ್ಲ. ಆದ್ರೆ ಕುಡಿಯೋಕ್ಕೆ ದೂರ ಹೋಗಬೇಕು. ಕಷ್ಟವಾಗ್ಲಿ ಬಿಡಿ. ಕುಡ್ಕೊಂಡು ನಮ್ಮೆದುರೇ ತೂರಾಡೋದು ಬೇಡ.

ಆದರೆ ಇದ್ರಲ್ಲಿ ದೊಡ್ಡ ವಿಶೇಷವೇನಿಲ್ಲ. ಲೈಸೆನ್ಸ್ ಇಲ್ಲದಿರೋರನ್ನ ಯಾರ್ಬೇಕಾದ್ರೂ ಮುಚ್ಚಿಸಬಹುದಂತೆ. 'ಲೈಸೆನ್ಸ್ ಇರೋದನ್ನ ಮುಚ್ಚಿಸಿ ನೋಡೋಣ ನಿಮಗೆ ತಾಕತ್ತಿದ್ರೆ' ಅಂತ ನಮ್ಮ ಗಂಡಂದಿರು ಗೇಲಿ ಮಾಡ್ತಾರೆ.

"ನೋಡಬೇಕು, ಲೈಸೆನ್ಸ್ ಇರೋದನ್ನೂ ಮುಚ್ಚಿಸಬೇಕು. ಯಾಕೆ ಆಗೋದಿಲ್ಲ ಅಂತ ನೋಡ್ಲೇ ಬೇಕು." - ಇಷ್ಟು ಹೇಳ್ತಾರೆ ನಾಗನ ಹಳ್ಳಿಯವರು. ಇನ್ನೇನು ಮಾಡ್ತಾರೋ ಕಾದು ನೋಡೋಣ.



# ನಾಲ್ಕು ನಾಟಕಗಳು

ವಿಷಯ : ದೈನಂದಿನ ಅನುಭವಗಳು ಲಿಂಗತ್ವದ ದೃಷ್ಟಿಯಲ್ಲಿ

ಕನಿಷ್ಠ ಸಮಯ :

2 ಗಂ.

ಉದ್ದೇಶ :

* ನಾಲಕ್ಕು ಬೇರೆ ಬೇರೆ ವಿಚಾರಗಳನ್ನು ಮಹಿಳೆಯರೇ ನಾಟಕದ (ರೋಲ್ ಪ್ಲೇ) ಮೂಲಕ ಅಭಿವ್ಯಕ್ತಿಸಿ ಚರ್ಚಿಸುವುದು.

ಚಟುವಟಿಕೆ :

* ಮಹಿಳೆಯರನ್ನು ನಾಲ್ಕು ಗುಂಪು ಮಾಡಿ, ಒಂದೊಂದು ಗುಂಪಿಗೆ ಈ ಕೆಳಗಿನ ಒಂದೊಂದು ಪ್ರಕರಣವನ್ನು ನಾಟಕ ತಯಾರಿಸುವಂತೆ ಕೊಡಿ.
  - ಸಮಪಾಲು ಪಡೆದದ್ದು - ಪು. 39
  - ಹದಿನೆಂಟಾಗದೆ ಮದುವೆ ಇಲ್ಲ - ಪು. 41
  - ಅಮಲು ಇಳಿಸಿದ್ದು - ಪು. 43
  - ಸಂಸಾರ ನ್ಯಾರಾ ಮಾಡೀವಿ - ಪು. 45
* ಗುಂಪುಗಳಲ್ಲಿ ಚರ್ಚಿಸಿ, ಪಾತ್ರಗಳನ್ನು ಹಂಚಿಕೊಂಡು ನಾಟಕ ತಯಾರಿಸುವುದಕ್ಕೆ ಸಹಕರಿಸಿ (30 ನಿ.) ನಾಟಕ 5ರಿಂದ 10 ನಿಮಿಷ ಮೀರದಂತಿರಲಿ.
* ಎಲ್ಲಾ ಗುಂಪುಗಳು ನಾಟಕ ತಯಾರಿಸಿ ಆದ ಮೇಲೆ, ಅವರು ಅದನ್ನು ಪ್ರದರ್ಶಿಸಲಿ. ಆಯಾಯ ವಿಚಾರಕ್ಕೆ ತಕ್ಕಂತೆ ಚರ್ಚೆ ನಡೆಸಿ. ಅದರ ಚರ್ಚೆಗೆ 10ರಿಂದ 15 ನಿಮಿಷ ಕಾಲಾವಕಾಶವಿರಲಿ.

ಗಮನಿಸಬೇಕಾದ ಅಂಶ :

* ನಾಟಕ ತಯಾರಿಸುವುದಕ್ಕೆ ಬೇಕಾದ ಸಹಕಾರ ನೀಡಿ.
* ಅನಾವಶ್ಯಕ ಎಳೆಯದಂತೆ ನೋಡಿಕೊಳ್ಳಿ.
* ಮುಖ್ಯ ವಿಷಯಕ್ಕೆ ಗಮನವಿರಲಿ.

ನಿರೀಕ್ಷಿತ ಫಲಿತಾಂಶ :

* ಮಹಿಳೆಯರು, ಬೇರೆ ಬೇರೆ ಪ್ರಕರಣಗಳನ್ನು ತಮ್ಮದಾಗಿಸಿಕೊಂಡು ಅಭಿವ್ಯಕ್ತಿಸಲು ಸಾಧ್ಯವಾಗುವುದು.

ವೈಯಕ್ತಿಕ ಟಿಪ್ಪಣಿ :

# ಸಮಪಾಲು ಪಡೆದದ್ದು...

14 ಸಮಯ : ಸಾರ್ವಜನಿಕ ಸೌಲಭ್ಯದ ನಿಯಂತ್ರಣ

**ಕನಿಷ್ಠ ಸಮಯ :**

25 ನಿ.

**ಆಡಕ :**

'ಸಮಪಾಲು ಪಡೆದದ್ದು' ಪುಟ-39

**ಉದ್ದೇಶ :**

* ಸಾರ್ವಜನಿಕ ಸೌಕರ್ಯಗಳು, ವ್ಯವಸ್ಥೆಗಳು ನ್ಯಾಯ ಪ್ರಕಾರ ನಡೆಯುವಲ್ಲಿ ಮಹಿಳೆಯರ ಪಾತ್ರ ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* ಈ ಕುರಿತು ನಾಟಕ ತಯಾರಿಸಿದ ಗುಂಪು ಅದನ್ನು ಪ್ರದರ್ಶಿಸಲಿ. ಅದರ ಆಧಾರದ ಮೇಲೆ ಚರ್ಚೆ ನಡೆಸಿ. ಮುಖ್ಯವಾಗಿ ಸಾರ್ವಜನಿಕ ಸೌಲಭ್ಯ ಅದರಲ್ಲೂ 'ರೇಶನ್' ಒಂದು ಸಂಪನ್ಮೂಲ ಎಂಬ ವಿಚಾರ ಚರ್ಚೆಯಾಗಲಿ. ಈ ಇಲಾಖೆಯ ಬಗ್ಗೆ (ಪಡಿತರ ವ್ಯವಸ್ಥೆ) ಕೂಡಾ ಚರ್ಚೆ ನಡೆಸಿ.

**ಗಮನಿಸಬೇಕಾದ ಅಂಶ :**

* ಈ ವ್ಯವಸ್ಥೆಯಲ್ಲಿ ಅನ್ಯಾಯವೆಂಬುದು ಹಳ್ಳಿಯ ಆ ರೇಶನ್ ಅಂಗಡಿಯಲ್ಲಿ ಮಾತ್ರ ಇರುವುದಲ್ಲ, ಅದರ ಹಿಂದೆ ಭ್ರಷ್ಟಾಚಾರದ ಜಾಲವೇ ಇದೆ ಎಂಬ ಅಂಶ ನಿಮ್ಮ ಗಮನದಲ್ಲಿರಲಿ.

* ಅಂದರೆ, ಈ ಹಂತದಲ್ಲಿ ಹೋರಾಡಿ ಸ್ವಲ್ಪ ಹೆಚ್ಚು ರೇಶನ್ ಪಡೆದಲ್ಲಿಗೆ ಎಲ್ಲಾ ನ್ಯಾಯ ಸಿಕ್ಕಿತು ಅನ್ನುವ ಭಾವನೆ ಬರುವುದು ಬೇಡ.

**ನಿರೀಕ್ಷಿತ ಫಲಿತಾಂಶ :**

* ಅನ್ಯಾಯದ ವಿವಿಧ ಮುಖಗಳ ಪರಿಚಯ ಸಿಗಬೇಕು.

* ಜತೆ ಸೇರಿ ಪ್ರಶ್ನಿಸಬಹುದು ಎನ್ನುವ ಭರವಸೆ ಹುಟ್ಟಬೇಕು.

**ವೈಯಕ್ತಿಕ ಟಿಪ್ಪಣಿ :**

ಪ್ರಕರಣ

# ಸಮಪಾಲು ಪಡೆದದ್ದು...

ಕಲಸಾಪುರ ಗ್ರಾಮದಲ್ಲಿ, ಎರಡು ತಿಂಗಳಿಂದ ರೇಶನ್ ಕೊಟ್ಟಿರಲಿಲ್ಲ. ಮುಂದಿನ ತಿಂಗಳ ರೇಶನ್ ಬಂದಾಗ ಸಂಘದ ಮಹಿಳೆಯರು ಹೋಗಿ ರೇಶನ್ ತೆಗೆದುಕೊಂಡು ಬಂದರು. ಪರಸ್ಪರ ಚರ್ಚೆ ಮಾಡಿದಾಗ, 3 ಕೆ.ಜಿ. ಅಕ್ಕಿ, 3 ಕೆ.ಜಿ. ಗೋಧಿ, 1 ಕೆ.ಜಿ. ಸಕ್ಕರೆ ಕೊಟ್ಟಿರುವುದು ತಿಳಿಯಿತು. ಬೇರೆ ಕೇರಿಯವರಿಗೆ 6 ಕೆ.ಜಿ.ಯಂತೆ ಕೊಟ್ಟಿರುವುದೂ ತಿಳಿಯಿತು.

ಹೋಗಿ ಕೇಳೋಣ ಎಂದು ಸಂಘದ ಮಹಿಳೆಯರು ಹೊರಟರು. "ಯಾಕ್ರಿ ಗೌಡ್ರ ಎಲ್ಲರಿಗೂ 6 ಕಿ.ಲೋ.ದಾಂಗ ಕೊಟ್ಟು, ನಮ್ಮ ಕೇರಿ ಅವರಿಗೆ 3 ಕಿ.ಲೋ.ದಾಂಗ ಕೊಟ್ರಿ" ಅಂತ ವಿಚಾರಿಸಿದರು.

"ನಿ ಒಬ್ಬಾಕಿ ಕೇರಿ ಒಳಗ ಬಹಳ ಶ್ಯಾಣೆ ಆಗಿ ಏನ" ಗೌಡ್ರು ದಬಾಯಿಸ ಹೊರಟರು.

"ಹೌದ್ರಿ ಮತ್ತೆ ನಿಮ್ಮಂತವರಿಗೆ ಒಬ್ಬರ ಶ್ಯಾಣೆ ಯಾಕ, ಹತ್ತು ಮಂದಿ ತಯಾರಾಗಬೇಕು" ಎಂದು ಸರಿಯಾಗಿ ಮಾತನಾಡಿದಾಗ, ಗೌಡ್ರು ಉಳಿದ ಮಹಿಳೆಯರಿಗೂ 6 ಕೆ.ಜಿ.ಯಂತೆ ರೇಶನ್ ಕೊಟ್ಟರು.



# ಹದಿನೆಂಟಾಗದೆ ಮದುವೆ ಇಲ್ಲ

15 ವಿಷಯ : ಹೆಣ್ಣು ಮಕ್ಕಳ ಶಿಕ್ಷಣ, ಮದುವೆ ವಯಸ್ಸು

**ಕನಿಷ್ಠ ಸಮಯ :**

25 ನಿ.

**ಅಡಕ :**

'ಹದಿನೆಂಟಾಗದೆ ಮದುವೆ ಇಲ್ಲ'
ಪುಟ - 41

**ಉದ್ದೇಶ :**

* ಹೆಣ್ಣು ಮಕ್ಕಳು ಹುಟ್ಟಿರುವುದೇ ಮದುವೆಯಾಗುವುದಕ್ಕೆ ಎಂಬ ಧೋರಣೆ ಬದಲಾಗುವುದು.
* ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಮಹತ್ವ ಕೊಡುವುದು.

**ಚಟುವಟಿಕೆ :**

* ಈ ವಿಚಾರವಾಗಿ ಮಹಿಳೆಯರು ತಯಾರಿಸಿದ ನಾಟಕ ಪ್ರದರ್ಶಿಸಲಿ. ಅದರ ಮೇಲೆ ಚರ್ಚೆ ನಡೆಸಿ.
* ಮುಖ್ಯವಾಗಿ ಹೆಣ್ಣು ಮಕ್ಕಳ ಶಿಕ್ಷಣದ ಬಗ್ಗೆ ಒತ್ತು ಕೊಡಿ. ಶಿಕ್ಷಣಕ್ಕೆ ಅವಕಾಶ ಕೊಡದೆ, "ಹೆಣ್ಣು ಮಕ್ಕಳ ಬುದ್ಧಿ ಮೊಳಕಾಲ ಕೆಳಗೆ" ಎಂದು ಆಮೇಲೆ ಜರೆಯುವುದು ಸರಿಯೇ ಎಂದು ಚರ್ಚಿಸಿ. ಮದುವೆ ವಯಸ್ಸಿನ ಬಗೆಗಿನ ಕಾನೂನನ್ನೂ ವಿವರಿಸಿ.

**ಗಮನಿಸಬೇಕಾದ ಅಂಶ :**

* ಹೆಣ್ಣು ಮಕ್ಕಳು ಇಂತಹ ನಿರ್ಧಾರಗಳಿಗೆ ಬರುವಾಗ, ಅವರನ್ನು ಲೇವಡಿ ಮಾಡದೆ, ಬೆಂಬಲಿಸುವ ದಾರಿಗಳನ್ನು ಹುಡುಕಲು ಸಹಕರಿಸುವಂತೆ ಚರ್ಚಿಸಿ.
* ಎಲ್ಲಾ ಸಂದರ್ಭಗಳಲ್ಲಿ ಇಷ್ಟು ಸುಲಭವಾಗಿ ಸಮಸ್ಯೆ ಬಗೆಹರಿಯುವುದಿಲ್ಲ ಎಂಬುದು ನೆನಪಿರಲಿ.

**ನಿರೀಕ್ಷಿತ ಫಲಿತಾಂಶ :**

* ಶಿಕ್ಷಣವು ಒಂದು ಸಂಪನ್ಮೂಲ ಎಂಬುದು ಸ್ಪಷ್ಟವಾಗಬೇಕು.
* ಈ ಪ್ರಕರಣದಲ್ಲಿ ಬರುವಂತಹ ಹೆಣ್ಣು ಮಕ್ಕಳನ್ನು ಬಲವಂತ ಮಾಡಿ ಮದುವೆ ಮಾಡಿಸದೆ, ಅವರ ತೀರ್ಮಾನಕ್ಕೆ ಬೆಂಬಲ ಕೊಡಬೇಕು ಎನ್ನುವ ಹೊಸ ಆಲೋಚನೆ ಗಟ್ಟಿ ಮಾಡುವುದು.

**ವೈಯಕ್ತಿಕ ಟಿಪ್ಪಣಿ :**

ಪ್ರಕರಣ

# ಹದಿನೆಂಟಾಗದೆ ಮದುವೆ ಇಲ್ಲ

ತೇಗಂಪುರ ಗ್ರಾಮದಲ್ಲಿ ನಡೆಯುವ, ರಾತ್ರಿ ಶಾಲೆಗೆ ಬರುತ್ತಿರುವ ಅಪ್ರಾಪ್ತ ವಯಸ್ಸಿನ ಬಾಲಕಿ ಒಬ್ಬಳ ಮನೆಯಲ್ಲಿ ಆಕೆಯ ಮದುವೆ ಬಗ್ಗೆ ಚರ್ಚೆ ನಡೆಯುತ್ತಿತ್ತು. ಇದನ್ನು ತಿಳಿದ ಬಾಲಕಿ ಇದಕ್ಕೆ ವಿರೋಧ ವ್ಯಕ್ತ ಪಡಿಸಿದಳು. ಮದುವೆಗೆ ಇರುವ ಪ್ರಾಪ್ತ ವಯಸ್ಸಿನ ಬಗ್ಗೆ ಅವಳಲ್ಲಿ ರಾತ್ರಿ ಶಾಲೆಯ ಪ್ರಭಾವದಿಂದ ಅರಿವು ಮೂಡಿತ್ತು. ಇದರಿಂದ ಆ ಹುಡುಗಿ ಮನೆಯಲ್ಲಿ ತನ್ನ ತಂದೆ ತಾಯಿಗಳಿಗೆ 'ನೀವು ನನಗೆ ಮದುವ ಮಾಡ ಹೊರಟರೆ ನಾನೇ ಹೋಗಿ ಪೋಲೀಸ್ ಕಂಪ್ಲೇಂಟ್ ಕೊಟ್ಟು ಬರುತ್ತೇನೆ' ಎಂದಳು. ಇದರಿಂದ ಆಕೆಯ ಸಂಬಂಧಿಕರೆಲ್ಲರೂ ಮೌನವಾಗಿ ಬಿಟ್ಟರು. ಮುಂದೆ ಮದಿವಿ ಮಾತೆ ಇಲ್ಲ.



# "ಅಮಲು ಇಳಿಸಿದ್ದು"

16 ವಿಷಯ : ಸಾರ್ವಜನಿಕವಾಗಿ ಮಾತಿನ ಹಿಂಸೆ

ಕನಿಷ್ಠ ಸಮಯ :

25 ನಿ.

ಉದ್ದೇಶ :

* ಮಹಿಳೆಯರ ಬಗ್ಗೆ ಲೈಂಗಿಕವಾಗಿ ಮಾತಿನ ಮೂಲಕ ಅವಮಾನಿಸುವುದು ಕೂಡಾ ಒಂದು ಹಿಂಸೆ.
* ಎಲ್ಲರೂ ಜತೆಸೇರಿ ಇಂತಹವನ್ನು ಸದೆಬಡಿಯಬಹುದು ಎಂಬುದನ್ನು ಅರ್ಥ ಮಾಡಿಕೊಳ್ಳುವುದು.

ಚಟುವಟಿಕೆ :

* ಈ ಬಗ್ಗೆ ಮಹಿಳೆಯರು ತಯಾರಿಸಿದ ನಾಟಕವನ್ನು ಪ್ರದರ್ಶಿಸಲಿ. ಅದರ ಮೇಲೆ ಚರ್ಚೆ ನಡೆಯಲಿ.
* ಮಹಿಳೆಯರು ರೂಪಿಸಿದ ಕಾರ್ಯತಂತ್ರದ ಬಗ್ಗೆ, ಅವರ ದಿಟ್ಟತನದ ಬಗ್ಗೆ, ಮಹಿಳೆಯರು ಬಾಯಿ ತೆರೆದರೆಂದರೆ ಇಂತಹ ಪುರುಷರು ತೆಪ್ಪಗಾಗುವ ಬಗ್ಗೆ ಚರ್ಚೆ ನಡೆಯಲಿ.
* ಮಹಿಳೆಯರನ್ನು ಹೆದರಿಸುವ ಒಂದು ದೊಡ್ಡ ಆಯುಧ, ಮಹಿಳೆಯರ 'ಲೈಂಗಿಕತೆ' ಮೇಲೆ ನಿಯಂತ್ರಣ, ಅದರ ಲೇವಡಿ ಎಂಬುದು ಚರ್ಚೆಗೆ ಬರಲಿ.
* ಈ ಪ್ರಕರಣದಲ್ಲಿ ಚಲನಶೀಲತೆ, ಸಾರ್ವಜನಿಕವಾಗಿ ಸಭೆ ಸೇರುವಿಕೆ, ಸಾರ್ವಜನಿಕವಾಗಿ ಮಾತಾಡುವುದು - ಇವೆಲ್ಲವುದರ ಮಹತ್ವವನ್ನು ಚರ್ಚೆಗೆ ತೆಗೊಳ್ಳಿ.

ಅಡಕ :

'ಅಮಲು ಇಳಿಸಿದ್ದು' ಪುಟ - 43

ಗಮನಿಸಬೇಕಾದ ಅಂಶ :

* ಕುಡಿತದ ಬಗ್ಗೆ ಬೇರೆ ಚರ್ಚೆ ಇರುವುದರಿಂದ, ಲೈಂಗಿಕತೆಗೆ ಸಂಬಂಧಿಸಿದ ಚರ್ಚೆ ನಡೆಯಲಿ.

ನಿರೀಕ್ಷಿತ ಫಲಿತಾಂಶ :

* ಮಹಿಳೆಯರಿಗೆ ಇಂತಹುದು ಸಾಧ್ಯ ಎಂಬ ಭರವಸೆ ಹುಟ್ಟಿಸಬೇಕು.
* ಮಾತಿನ ಮೂಲಕವೇ ಇರಲಿ ಏನೇ ಇರಲಿ ಲೈಂಗಿಕ ವಿಚಾರದ ಮೂಲಕ ಹಿಂಸೆ ಮಾಡುವುದನ್ನು ಮಹಿಳೆಯರು 'ಪರಿಸ್ಥಿತಿಯೇ ಹೀಗೆ' ಎಂದು ಒಪ್ಪಿಕೊಳ್ಳಬೇಕಾಗಿಲ್ಲ ಎಂಬುದು ಅರ್ಥವಾಗಬೇಕು.
* ಮಹಿಳೆಯರು ಸಾರ್ವಜನಿಕವಾಗಿ ಗೌರವವನ್ನು ಪಡೆಯುವುದು ಕೂಡಾ ಅವರ ಸ್ಥಾನಮಾನಕ್ಕೆ ಸಂಬಂಧಿಸಿದ ವಿಚಾರ ಎಂಬುದು ಅರ್ಥವಾಗಬೇಕು.

ವೈಯಕ್ತಿಕ ಟಿಪ್ಪಣಿ :

ಪ್ರಕರಣ

# "ಅಮಲು ಇಳಿಸಿದ್ದು"

ಸಿಂಧನೂರಿನಲ್ಲಿ ಮಹಿಳಾ ಸಂಘ ಏಳು ವರುಷಗಳಿಂದ ಉತ್ತಮ ರೀತಿಯಲ್ಲಿ ನಡೆದುಬಂದಿದೆ. ಹೋಳಿಹಬ್ಬದ ದಿವಸ ಸಂಘ ಮಹಿಳೆಯರ ಗಂಡಂದಿರು ಕೋಲು ಆಡುವಾಗ ಒಬ್ಬ ಗೌಡ ಸಾರಾಯಿ ಕುಡಿದು ಏನೇನೋ ಆಡಿಕೊಳ್ಳುತ್ತಿದ್ದನು. ಉದಾ.: ಗಂಡಸರಿಗೆ, ಸೂಳೆಮಕ್ಕಳೇ ನಿಮ್ಮ ಹೆಂಡರಿಗೆ ಹಾಳು ಮಾಡುತ್ತೇನೆ, ಎಂದು ಬೈದನು. ಯಾವಾಗಲೂ ಹೀಗೇ ಕುಡಿದುಕೊಂಡು ಬಂದು ಗಲಾಟೆ ಮಾಡುತ್ತಿದ್ದನು. ರಾತ್ರಿ ವೇಳೆ ಕುಡಿದು ಬಂದ ವ್ಯಕ್ತಿಗೆ ಏನು ಅನ್ನಬಾರದು. ನಾಳೆ ನಾವು ಅವನ ಮನೆಗೆ ಹೋಗಿ ಕೇಳಬೇಕು, ಎಂದು ಮಹಿಳೆಯರು ರಾತ್ರಿ ಮೀಟಿಂಗ್ ಮಾಡಿ ತೀರ್ಮಾನ ಮಾಡಿದರು.

ಬೆಳಗ್ಗೆ ಅವನು ಹಾಸಿಗೆಯಿಂದ ಏಳುವುದಕ್ಕಿಂತ ಮುಂಚೆ ಎಲ್ಲ ಮಹಿಳೆಯರು ಸೇರಿ ಅವನ ಮನೆ ಮುಂದೆ ನಿಂತರು. "ರಾತ್ರಿ ಏನು ಅಂದಿ. ಹೊರಗೆ ಬಾ. ಯಾರ ಹೆಂಡರು ಬೇಕು. ಈಗ ಎಲ್ಲರು ಬಂದಿದ್ದೇವೆ" ಎಂದು ಸವಾಲು ಹಾಕಿದರು. ಗೌಡ ಒಳಗಿಂದ ಬಂದು, "ನಾನು ತಪ್ಪು ಮಾಡಿದ್ದೇನೆ. ಕ್ಷಮಿಸಿ. ರಾತ್ರಿ ನಶಾದಲ್ಲಿ ಏನೇನೋ ಅಂದೆ ನನಗೇ ಗೊತ್ತಿಲ್ಲ, ಇನ್ನೊಂದು ಸಲ ಬೈದಾಗ ನಿಮ್ಮ ಕಾಲಿನ ಚಪ್ಪಲಿಯಿಂದ ಹೊಡೆಯಿರಿ" ಎಂದು ಕೇಳಿಕೊಂಡನು.

ಮಹಿಳೆಯರು, ಇನ್ನೊಮ್ಮೆ ಕುಡಿದು ಬಂದು ಹೀಗೆ ಆಡಿದರೆ ಸುಮ್ಮನೆ ಬಿಡುವುದಿಲ್ಲವೆಂದು ಎಚ್ಚರಿಕೆ ಕೊಟ್ಟು ಬಂದರು.



# ಸಂಸಾರ ನ್ಯಾರಾ ಮಾಡೀವಿ...

17 ವಿಷಯ : ಕೌಟುಂಬಿಕ ಹಿಂಸೆ

**ಕನಿಷ್ಠ ಸಮಯ :**

25 ನಿ.

**ಅಡಕ :**

'ಸಂಸಾರ ನ್ಯಾರಾ ಮಾಡೀವಿ' ಪುಟ-45

**ಉದ್ದೇಶ :**

* ಮಹಿಳೆಯರು/ಸಂಘ ಕೌಟುಂಬಿಕ ಹಿಂಸೆ ಕಡಿಮೆ ಮಾಡುವ ಕೆಲಸವನ್ನು ಕೂಡಾ ಮಾಡಬೇಕು ಎಂಬುದು ಮನವರಿಕೆಯಾಗುವುದು.
* ಕೌಟುಂಬಿಕ ಹಿಂಸೆಯ ಸ್ವರೂಪ ಅರಿಯುವುದು.

**ಚಟುವಟಿಕೆ :**

* ಒಂದು ಗುಂಪಿನವರು ಈ ವಿಚಾರವಾಗಿ ತಯಾರಿಸಿದ ನಾಟಕ ಪ್ರದರ್ಶಿಸಲಿ. ಅದರ ಆಧಾರದಲ್ಲಿ ಚರ್ಚೆ ನಡೆಯಲಿ. ಗಂಡ ಹೆಂಡತಿಗೆ ಹೊಡೆಯುವುದು, ವರದಕ್ಷಿಣೆ, ಮುಂತಾದ ವಿಚಾರಗಳನ್ನು ಎತ್ತಿಕೊಳ್ಳಿ. ಸಂಘದವರು ಇದರತ್ತ ಗಮನಹರಿಸಬೇಕು. ಇದು ಮನೆಯೊಳಗಿನ ಸುದ್ದಿ ಎಂದು ಬಿಟ್ಟು ಬಿಡಬೇಕಾಗಿಲ್ಲವೆಂಬುದು ಚರ್ಚೆಯಲ್ಲಿ ಬರಲಿ.

**ಗಮನಿಸಬೇಕಾದ ಅಂಶ :**

* ನಾಟಕ ತೀರಾ ಉದ್ದ ಎಳೆಯುವ ಸಂಭವವಿದೆ ನೋಡಿಕೊಳ್ಳಿ.
* ನಾಟಕದಲ್ಲಿ ಮುಖ್ಯ ವಿಚಾರಗಳು ತಪ್ಪಿಹೋಗದಂತೆ ನೋಡಿಕೊಳ್ಳಿ.

**ನಿರೀಕ್ಷಿತ ಫಲಿತಾಂಶ :**

* ಸಂಘಕ್ಕೆ ಇದೊಂದು ಹೆಮ್ಮೆ ಪಡುವ ಕೆಲಸ, ಮಹಿಳೆಯರ ಸ್ಥಾನಮಾನಕ್ಕೂ ಸಂಬಂಧಿಸಿದ ಕೆಲಸ ಎಂಬುದು ಮನವರಿಕೆಯಾಗಬೇಕು.
* ಮನೆಯೊಳಗಿನ ಹಿಂಸೆ, ಮುಚ್ಚಿಡಬೇಕಾಗಿಲ್ಲ ಎಂಬ ಹೊಸ ಆಲೋಚನೆ ಹುಟ್ಟಬೇಕು.

**ವೈಯಕ್ತಿಕ ಟಿಪ್ಪಣಿ :**

ಪ್ರಕರಣ

# ಸಂಸಾರ ನ್ಯಾರಾ ಮಾಡೀವಿ...

ಬೇಗೂರಿನ ಸಾಕವ್ವ, ಎಂಬಾಕೆ ಹೆಚ್ಚಿನ ವರದಕ್ಷಿಣೆ ತರಲಿಲ್ಲ ಎಂಬ ಕಾರಣಕ್ಕಾಗಿ ತನ್ನ ಗಂಡ ಮತ್ತು ಅತ್ತೆಯಿಂದ ಕಿರುಕುಳ ಅನುಭವಿಸುತ್ತಿದ್ದಳು. ಒಂದು ಸಾರಿ, ಸಾಕವ್ವಳನ್ನು ಅವಳ ಗಂಡ ಮನೆಯಿಂದ ಹೊರಗೆಳೆದು ಹೊಡೆಯುತ್ತಿರುವುದನ್ನು ಸಂಘ ಮಹಿಳೆ ಪುಟ್ಟ ನಿಂಗಮ್ಮ ನೋಡಿದಳು. ತಕ್ಷಣ ಕಸಪೊರಕೆ ಹಿಡಿದು 'ನಿಂಗೆ ಧೈರ್ಯ ಇದ್ದರೆ ಈಗ ಹೊಡಿ' ಎಂದು ಅಡ್ಡ ನಿಂತಳು. 'ನಂನ್ ಹೆಂಡ್ತಿ, ನಾ ಏನಾರ ಮಾಡ್ತೀನಿ, ನೀ ಯಾರಾ ಕೇಳಾಕೆ' ಗಂಡನೆಂದ.

ಆತನಿಗೆ ಮುಂದೆ ಮಾತನಾಡಲು ಅವಕಾಶ ಸಿಗದಂತೆ ಕ್ಷಣದಲ್ಲಿ ಸಂಘದ ಹತ್ತಾರು ಮಹಿಳೆಯರು ಸುತ್ತುವರೆದು 'ಹೆಂಡ್ತಿ ಆದ ಮಾತ್ರಕ್ಕೆ ಪುಗಸಟ್ಟೆ ಹೊಡೆಯೋ ಕಾನೂನಿಲ್ಲ, ಬಾಳಾಟ ಮಾಡಿಸೋ ಯೋಗ್ಯತೆ ಇಲ್ಲದ ಮ್ಯಾಕ ಮದ್ವೆ ಯಾಕಾದೆ ? ಈವತ್ತೇ 8000 ಮಡಗು, ಸಾಕಿಗೆ ಬೇರೆ ಮದುವೆ ನಾವು ನಿಂತು ಮಾಡ್ತೀವಿ' ಎಂದರು.

ವಿಷಯ ಕುಲದ ಯಜಮಾನರಿಗೂ ಮುಟ್ಟಿತು. ಸಂಘ ಮಹಿಳೆಯರು ಮಾಡಿರುವುದು ಸರಿಯಾಗಿಯೇ ಇದೆ. ಅವ ಜಾಸ್ತಿ ಮಾತಾಡಿದ್ರೆ, ಪೋಲೀಸರಿಗೆ ಕೇಸ್ ಮಾಡಿ, ನಾವಿದ್ದೇವೆ ಎಂದು ಪ್ರತಿಕ್ರಿಯೆ ಬಂತು.

ಎಲ್ಲಿರಿಂದ ಇಂತಹ ಆಕ್ರಮಣ ನಿರೀಕ್ಷಿಸದ ಗಂಡ, ಈಗ ಹೆಂಡತಿಯೊಂದಿಗೆ ಗಲಾಟೆ ಇಲ್ಲದೆ ಸಂಸಾರ ಮಾಡಿಕೊಂಡಿದ್ದಾನೆ. ಮಗನಿಗೆ ಬೆಂಬಲಿಸುತ್ತಿದ್ದ ಸಾಕಿಯ ಅತ್ತೆ ರತ್ನಮ್ಮ ಬೇರಾರೂ ಅಲ್ಲ, ಸಂಘದ ಸದಸ್ಯೆಯೇ ! ಈಕೆಗಂತು ಸಂಘದವರು ಚೆನ್ನಾಗಿಯೇ ಛೀಮಾರಿ ಹಾಕಿದ್ದಾರೆ.





# ವಸಂತಿಯ ತೀರ್ಮಾನ

18 ವಿಷಯ : ಮದುವೆ ವಿಚಾರ

**ಕನಿಷ್ಠ ಸಮಯ :**

1 ಗಂ.

**ತಯಾರಿ :**

* ಪ್ರಕರಣದ 2 ಪ್ರತಿ ಮಾಡಿಟ್ಟು ಕೊಳ್ಳಿ. ಎರಡು ರೀತಿಯ ವಾದಗಳನ್ನು ನೀವು ಕೂಡಾ ಮುಂಚಿತವಾಗಿ ಟಿಪ್ಪಣಿ ಮಾಡಿಟ್ಟು ಕೊಳ್ಳಿ.

**ಅಡಕ :**

'ವಸಂತಿಯ ತೀರ್ಮಾನ' ಪುಟ-47

**ಉದ್ದೇಶ :**

* ತನ್ನ ಮದುವೆ ವಿಚಾರದ ಬಗ್ಗೆ, ನಿರ್ಧಾರ ತೆಗೆದುಕೊಳ್ಳುವ ಹಕ್ಕು ಮಹಿಳೆಯರಿಗೂ ಇದೆ ಎಂಬುದನ್ನು ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* ಗುಂಪನ್ನು ಎರಡು ಗುಂಪುಗಳಾಗಿ ವಿಭಾಗಿಸಿ. ವಸಂತಿಯ ಪ್ರಕರಣವನ್ನು ಎರಡು ಗುಂಪಿನವರಿಗೂ ಕೊಡಿ. ಒಂದು ಗುಂಪಿನವರಿಗೆ, ಆಕೆಯ ತೀರ್ಮಾನ ಸರಿಯಲ್ಲ, ಆಕೆಗೆ ಆಕೆಯ ತಾಯಿ ಮತ್ತು ಸಂಘದವರು ಸಹಕಾರ ಕೊಟ್ಟುದು ಸರಿಯಲ್ಲ ಎಂದು ವಾದ ತಯಾರು ಮಾಡುವುದಕ್ಕೆ ಹೇಳಿ. ಮತ್ತೊಂದು ಗುಂಪಿಗೆ ಆಕೆಯ ತೀರ್ಮಾನ ಸರಿ ಎಂದು ವಾದ ತಯಾರು ಮಾಡುವುದಕ್ಕೆ ಹೇಳಿ. (15 ನಿ. ತಯಾರಿಗೆ ಸಮಯ ಕೊಡಿ.)
* ಎರಡು ಗುಂಪುಗಳೂ ತಯಾರಾದ ಮೇಲೆ ಮೊದಲ ಗುಂಪಿನಿಂದ ಒಬ್ಬರು ಮಧ್ಯೆ ಬಂದು ನಿಂತು ಸರಿಯಲ್ಲ ಎಂಬುದಕ್ಕೆ ವಿವರ ಕೊಡಲಿ. ಆಮೇಲೆ ಎರಡನೇ ಗುಂಪಿನವರು ಬಂದು ತೀರ್ಮಾನ ಸರಿ ಎಂಬುದಕ್ಕೆ ಅವರ ವಾದ ಮಂಡಿಸಲಿ. ಹೀಗೆ ಎರಡೂ ಕಡೆಯಿಂದ ಒಬ್ಬೊಬ್ಬರಾಗಿ ಬಂದು ವಾದ ಮಂಡಿಸಲಿ.
* ಎಲ್ಲರೂ ವಾದ ಮಂಡಿಸಿದ ಮೇಲೆ ತನ್ನ ಮದುವೆ ಬಗ್ಗೆ ತೀರ್ಮಾನಿಸಲು ಅವಕಾಶವಿಲ್ಲದ ಈ ಸಮಾಜದಲ್ಲಿ ಇದು ಒಂದು ಹೊಸ ಆಲೋಚನೆ, ಸಂಘದವರೂ ಇಂತಹ ವಿಚಾರಕ್ಕೆ ಸಹಕರಿಸಬಹುದು ಎಂಬ ವಿಚಾರ ಮನದಟ್ಟಾಗುವಂತೆ ಚರ್ಚಿಸಿ.

**ಗಮನಿಸಬೇಕಾದ ಅಂಶ :**

* ಎರಡು ಗುಂಪಿನಲ್ಲಿ ಅವರು ವಾದಗಳನ್ನು ತಯಾರು ಮಾಡುವಾಗ ಪರ, ವಿರೋಧ ಎರಡು ವಾದಗಳೂ ಗಟ್ಟಿಯಾಗಿ ಬರುವಂತೆ, ಸಹಕಾರ ಪ್ರೋತ್ಸಾಹ ಕೊಡಿ.
* ಮಹಿಳೆಯರು ಚರ್ಚಿಸುವಾಗ, ಹುಡುಗ ಮದುವೆಗೆ ಮುಂಚೆ ಆಚೀಚೆ ಕರೆಯುವುದು ಸರಿಯಲ್ಲ ಎಂಬ ಅಂಶಕ್ಕೆ ಮಹತ್ವ ಕೊಟ್ಟರೋ ಅಥವಾ ಹುಡುಗ ದಬ್ಬಾಳಿಕೆ ಮಾಡುವುದು ಸರಿಯಲ್ಲ ಎಂಬ ಅಂಶಕ್ಕೆ ಮಹತ್ವ ಕೊಟ್ಟರೋ ಎಂಬುದನ್ನು ಎಚ್ಚರಿಕೆಯಿಂದ ಗಮನಿಸಿ. ಇಲ್ಲಿ ನಮಗೆ ಮುಖ್ಯವಾಗಿರುವುದು 'ದಬ್ಬಾಳಿಕೆ ಸರಿಯಲ್ಲ' ಎಂಬ ಅಂಶ ಎಂಬುದು ನೆನಪಿರಲಿ.

**ನಿರೀಕ್ಷಿತ ಫಲಿತಾಂಶ :**

* ಸಮಾಜದಲ್ಲಿ ಸುತ್ತುಮುತ್ತಲು ಹೆಣ್ಣು ಮಕ್ಕಳು ತಮ್ಮ ಮದುವೆ ಬಗ್ಗೆ ಕಟ್ಟುಪಾಡು ಮೀರಿ ಹೊಸ ತೀರ್ಮಾನ ತೆಗೆದುಕೊಳ್ಳುವುದನ್ನು ತಪ್ಪು, ಕೆಟ್ಟದು, ಸೊಕ್ಕು ಎಂದು ನೋಡದೆ, ಅದನ್ನು ಮೆಚ್ಚುವಂತಹ ಹೊಸ ಆಲೋಚನೆ ಒಂದು ಸಿಗಬೇಕು.
* ಸಂಘದಲ್ಲಿ ಅಂಗನವಾಡಿಗೆ, ನೀರಿಗೆ, ಭೂಮಿಗೆ ಹೋರಾಡುವಂತೆ ಇಂತಹ ವಿಚಾರಗಳಿಗಾಗಿ ಕೆಲಸ ಮಾಡುವುದು ಕೂಡಾ ಮುಖ್ಯ ಎಂಬ ಯೋಚನೆ ಹುಟ್ಟಬೇಕು.

**ವೈಯಕ್ತಿಕ ಟಿಪ್ಪಣಿ :**

ಪ್ರಕರಣ

# ವಸಂತಿಯ ತೀರ್ಮಾನ

ಕಾನೂರಿನಲ್ಲಿ ಶಿವಮ್ಮ ಎಂಬ ಒಬ್ಬಾಕೆಗೆ ವಸಂತಿ ಎಂಬ ಒಬ್ಬಳು ಮಗಳಿದ್ದಳು. ವಸಂತಿ ಪಿ.ಯು.ಸಿ. ತನಕ ಕಲಿತಿದ್ದು, ಪ್ರೈವೇಟ್ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಳು. ಅಷ್ಟರಲ್ಲೇ ಆಕೆಗೆ ಹತ್ತಿರದ ಹಳ್ಳಿಯ ಒಬ್ಬ ಹುಡುಗನೊಂದಿಗೆ ಮದುವೆ ನಿಶ್ಚಯವಾಯಿತು. ಅವನು ತಂದೆತಾಯಿಗೆ ಒಬ್ಬನೆ ಮಗ. ಸ್ವಲ್ಪ ಆಸ್ತಿವಂತ ಎಂದು ಶಿವಮ್ಮನ ಮಗಂದಿರೂ ಖುಷಿಯಿಂದ ಒಪ್ಪಿದರು.

ಆದರೆ ನಿಶ್ಚಯವಾದ ಕೆಲವೇ ದಿನಗಳಲ್ಲಿ ಹುಡುಗ ವಸಂತಿ ಕೆಲಸ ಮಾಡುವ ಜಾಗಕ್ಕೆ ಹೋಗುವುದು, ಫಿಲಂ ನೋಡಲು ಬಾ ಎಂದು ಕರೆಯುವುದು, ಬೇಡದ ಮಾತಾಡುವುದು, ಸಂಶಯದಿಂದ ಪ್ರಶ್ನೆ ಕೇಳುವುದು, ಹಾಗಿರಬಾರದು ಹೀಗಿರಬಾರದು ಎಂದು ದಬಾಯಿಸುವುದು ಈ ರೀತಿಯಾಗಿ ವರ್ತಿಸತೊಡಗಿದನು.

ಇವನ ನಡವಳಿಕೆಯನ್ನು ಗಮನಿಸಿದ ವಸಂತಿಗೆ ಸರಿಯಾಗಲಿಲ್ಲ, ಮದುವೆಗೆ ಮುಂಚೆಯೇ ಇಷ್ಟು ದಬ್ಬಾಳಿಕೆ ಮಾಡುವವನು ಮದುವೆ ಆದ ನಂತರ ಹೇಗೋ ಎಂದು ತನ್ನ ತಾಯಿ, ಅಣ್ಣಂದಿರಿಗೆ ತನಗೆ ಈ ಮದುವೆ ಬೇಡ ಎಂದಳು. ಅಣ್ಣಂದಿರು ಅವಳ ನೋವನ್ನು ಅರ್ಥಮಾಡಿಕೊಳ್ಳಲಿಲ್ಲ. ಕೊನೆಗೆ ತಾನೇ ಒಂದು ನಿರ್ಧಾರಕ್ಕೆ ಬಂದಳು. ಈ ಮದುವೆ ತನಗೆ ಒಪ್ಪಿಗೆ ಇಲ್ಲವೆಂದು ಗಂಡಿನ ಮನೆಯವರಿಗೆ ತಾನೇ ಪತ್ರ ಬರೆದಳು.

ಇದು ಎರಡು ಗ್ರಾಮಕ್ಕೂ ಆತಂಕ ತಂದಿತು. ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ, ಹುಡುಗಿ ಗೊತ್ತಿಲ್ಲದೆ ಬರೆದಿದ್ದಾಳೆ, ಅವಳನ್ನು ಒಪ್ಪಿಸುತ್ತೇವೆ ಅಂದರು. ಇದು ನಡೆಯಲಿಲ್ಲ, ಅಣ್ಣಂದಿರು ವಸಂತಿಗೆ ಮಾನಸಿಕವಾಗಿ ತುಂಬಾ ಹಿಂಸೆ ಕೊಟ್ಟರು. ಆ ಸಮಯದಲ್ಲಿ ಅವಳ ನೋವನ್ನು ಅರ್ಥಮಾಡಿಕೊಂಡದ್ದು ಅವಳ ತಾಯಿ. ತಾಯಿ ಮಗಳು ಮನೆಯಿಂದ ಬೇರೆ ಸಹ ಆಗಬೇಕಾಯಿತು.

ಆ ಸಮಯದಲ್ಲಿ ಊರಿನ ಸಂಘದವರು, ತಾಯಿ ಮತ್ತು ಮಗಳನ್ನು ಸಭೆಯಲ್ಲಿ ಕೂರಿಸಿ, ಅವರಿಗೆ ಧೈರ್ಯ ಕೊಟ್ಟರು. "ವಸಂತಿ ಮಾಡಿದ ತೀರ್ಮಾನ ಒಳ್ಳೆಯದೆ, ಅದರಲ್ಲಿ ಮರ್ಯಾದೆ ಹೋಗುವಂತಹುದು ಏನೂ ಇಲ್ಲ, ಮುಂದಾಗುವ ಅನಾಹುತ ತಪ್ಪಿತಲ್ಲ ಎಂದು ಸಂತೋಷಪಡಿ. ನಾಳೆ ಗ್ರಾಮದವರು ನ್ಯಾಯ ಪಂಚಾಯ್ತಿಗೆ ಕರೆದರೂ ನಿಮ್ಮ ಪರವಾಗಿ ನಾವಿದ್ದೇವೆ. ನೀವು ತಾಯಿ, ಮಗಳು ಉಂಡು, ತಿಂದುಕೊಂಡು ಖುಶಿಯಿಂದ ಇರಿ" ಎಂದು ದೃಢವಾದ ಬೆಂಬಲ ಕೊಟ್ಟರು.



# ಪಂಚಾಯತ್ ರಾಜ್ಯದಲ್ಲಿ

19 ವಿಷಯ : ಪಂಚಾಯತ್ ರಾಜ್, ರಾಜಕೀಯದಲ್ಲಿ ಅವಕಾಶ

**ಕನಿಷ್ಠ ಸಮಯ :**

1 ಗಂ. 30 ನಿ.

**ತಯಾರಿ :**

ಪಂಚಾಯತ್‌ನ ಇತರ ಅನುಭವ ಗಳನ್ನು ಸಂಗ್ರಹಿಸಿಕೊಳ್ಳಿ, ಇದರ ಕಾನೂನಿನ ಬಗ್ಗೆ ಕೂಡಾ ಮಾಹಿತಿ ಸಂಗ್ರಹಿಸಿ.

ಹೆಚ್ಚಿನ ಮಾಹಿತಿಗಾಗಿ ಮಹಿಳಾ ಸಮಖ್ಯಾದ ಪಂಚಾಯತ್‌ರಾಜ್ ತರಬೇತಿ ಕೈಪಿಡಿಯನ್ನು ಓದಿಕೊಳ್ಳ ಬಹುದು.

**ಅಡಕ :**

'ಆತ್ಮವಿಶ್ವಾಸ ಹೆಚ್ಚಿಸಿದ ಮೆಂಬರ್‌ಗಿರಿ'-49
'ಆರಿಸಿ ಬಂದವಳ ದಬ್ಬಾಳಿಕೆ' - 50
'ಎಲ್ಲರಿಗೂ ಕುರ್ಚಿ' - 51

**ಉದ್ದೇಶ :**

* ಮಹಿಳೆಯರಿಗೆ ಅಧಿಕಾರ ಸಿಗುವಂತಹ ಪಂಚಾಯತ್ ರಾಜ್ ಅವಕಾಶವನ್ನು ಮಹಿಳೆಯರು ಊರಿನ ಒಳಿತಿಗಾಗಿ, ಮಹಿಳೆಯರ ಬೆಳವಣಿಗೆಗಾಗಿ ಹೇಗೆ ಉಪಯೋಗಿಸಿ ಕೊಳ್ಳಬಹುದು ಎಂಬುದನ್ನು ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* ಮಹಿಳೆಯರನ್ನು 3 ಗುಂಪುಗಳನ್ನಾಗಿ ಮಾಡಿ. ಒಂದೊಂದು ಗುಂಪಿಗೆ ಅವರೊಳಗೇ ಚರ್ಚಿಸುವುದಕ್ಕೆ ಪಂಚಾಯತ್ ರಾಜ್‌ಗೆ ಸಂಬಂಧಿಸಿದ ಒಂದೊಂದು ಪ್ರಕರಣಗಳನ್ನು ಕೊಡಿ.
* ಚರ್ಚೆ ಸರಿಯಾಗಿ ನಡೆಯುವಂತೆ ಸಹಕರಿಸಿ (30 ನಿ.)
* ದೊಡ್ಡ ಗುಂಪಿನಲ್ಲಿ ಸೇರಲಿ. ಪ್ರತಿಯೊಂದು ಗುಂಪಿನವರೂ ಪ್ರಕರಣವನ್ನು ವಿವರಿಸಿ, ಚರ್ಚೆ ಏನಾಯಿತೆಂದು ವಿವರಿಸಲಿ.
* ನೀವು ಒಟ್ಟಾರೆಯಾಗಿ ಪಂಚಾಯತ್ ರಾಜ್‌ಗೆ ಸಂಬಂಧಿಸಿದ ಅಂಶಗಳು ಚರ್ಚೆಗೆ ಬರುವಂತೆ ನೋಡಿಕೊಳ್ಳಿ. ಮುಖ್ಯವಾಗಿ ಮಹಿಳೆಯರಿಗೆ ಈ ಅವಕಾಶ ಸಿಕ್ಕಿದ ಬಗ್ಗೆ, ಸದಸ್ಯರಾದ ಮೇಲೆ ಅಥವಾ ಅಧಿಕಾರ ಸಿಕ್ಕಿದ ಮೇಲೆ ಅವರು ಹೇಗೆ ನಡಕೊಳ್ಳಬೇಕು ಎಂಬುದರ ಬಗ್ಗೆ ಸಂಘದವರು ಇದರಲ್ಲಿ ಯಾವ ಯಾವ ರೀತಿಯಲ್ಲಿ ಬೆಂಬಲ ಕೊಡಬಹುದು ಎಂಬುದರ ಬಗ್ಗೆ ಚರ್ಚೆ ನಡೆಯಲಿ.

ಹಾಗೂ

ಸದಸ್ಯರಾದ ಮೇಲೆ ಅವರು ಮಾಡುವ ಕೆಲಸಗಳು ಹೆಚ್ಚಾಗಿ ಪರಿಸ್ಥಿತಿಗೆ ಸಂಬಂಧಿಸಿದೆಯೋ, ಸ್ಥಾನಮಾನಕ್ಕೆ ಸಂಬಂಧಿಸಿದೆಯೋ ಎಂಬ ವಿಚಾರ ವಿಶ್ಲೇಷಣೆ ಮಾಡಿ.

ಸದಸ್ಯರಾದ ಮೇಲೆ ತಾವು ಹೆಚ್ಚು ಹೆಚ್ಚು ಕಲಿಯಲು, ಮಾಹಿತಿ ಪಡೆಯಲು ಏನು ಮಾಡಬಹುದು ಎಂದು ಚರ್ಚಿಸಿ. ಗ್ರಾಮಸಭೆ ನಡೆಯುವಂತೆ ಮಾಡುವಲ್ಲಿ ಸದಸ್ಯರ ಮತ್ತು ಸಂಘದವರ ಪಾತ್ರವೇನು ಎಂಬುದರ ಕಡೆಗೂ ಚರ್ಚೆ ಇರಲಿ.

**ಗಮನಿಸಬೇಕಾದ ಅಂಶಗಳು :**

* ಪಂಚಾಯತ್ ರಾಜ್ ವ್ಯವಸ್ಥೆಯನ್ನು ಅವರು ಅನುಭವಿಸಿರುವವರು. ಆದುದರಿಂದ ಅವರ ಅನುಭವಗಳೊಂದಿಗೇ ಚರ್ಚೆ ಸಾಗಲಿ.

**ನಿರೀಕ್ಷಿತ ಫಲಿತಾಂಶ :**

* ಮಹಿಳೆಯರಿಗೆ ಇದು ತಮಗೆ ಸಿಕ್ಕಿದ ಒಂದು ಉತ್ತಮ ಅವಕಾಶ, ಇದನ್ನು ತಮ್ಮ ಹಿತಕ್ಕಾಗಿ ಬಳಸಬೇಕು ಎಂಬ ಭಾವನೆ ದೃಢವಾಗಬೇಕು.
* ಈ ನಿಟ್ಟಿನಲ್ಲಿ ಸಂಘ ಏನೇನು ಮಾಡಬಹುದು ಎಂಬುದರ ನಿರ್ಧಿಷ್ಟ ಚಿತ್ರಣ ಸಿಗಬೇಕು.

**ವೈಯಕ್ತಿಕ ಟಿಪ್ಪಣಿ :**

ಪ್ರಕರಣ

# ಆತ್ಮವಿಶ್ವಾಸ ಹೆಚ್ಚಿಸಿದ ಮೆಂಬರ್‌ಗಿರಿ

ಕಮಲಮ್ಮ ಸಂಘ ಸೇರಿದಾಗಿನಿಂದ ಸಮಖ್ಯಾದಿಂದ ನಡೆದ ತರಬೇತಿಗಳಲ್ಲಿ ಭಾಗವಹಿಸಿ ಮತ್ತು ಸಂಘ ಸಭೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಧೈರ್ಯವಾಗಿ ಮಾತಾಡುವುದನ್ನು ಕಲಿತಿದ್ದಾರೆ. ನಾಲ್ಕಾರು ಕಡೆ ಓಡಾಡಿ ಮಾಹಿತಿ ತಿಳಿದುಕೊಂಡಿದ್ದಾರೆ. ಧೈರ್ಯವಾಗಿ ಮಾತಾಡುತ್ತಾರೆ. ಆಯ್ಕೆ ಆದರೆ ತಮಗೂ ಹಾಗೂ ಸಂಘಕ್ಕೂ ಒಳ್ಳೆಯ ಕೆಲಸ ಮಾಡಿಕೊಡುತ್ತಾರೆ ಎಂದು ಭಾವಿಸಿ ಅವರನ್ನು ಪ್ರೋತ್ಸಾಹಿಸಿ, ಸ್ಪರ್ಧಿಸಲು ಹುರಿದುಂಬಿಸಿ ಆಯ್ಕೆ ಆಗಲು ಸಂಘದವರೇ ಕಾರಣರಾಗಿದ್ದಾರೆ.

ಪಂಚಾಯ್ತಿ ಸಭೆ ಪ್ರಾರಂಭಿಸುವಾಗ ಹಿಂದಿನ ಸಭೆಯ ನಡವಳಿಕೆ ಓದದೆ, ಹಿಂದೆ ಠರಾವು ಪಾಸ್ ಮಾಡಿದ ಕೆಲಸ ಎಲ್ಲಿಯವರೆಗೆ ಆಗಿದೆ ಎಂಬುದನ್ನೇನೂ ಚರ್ಚಿಸದೆ ಬರೀ ಅಂದಿನ ಸಭೆಯ ಚರ್ಚೆ ಮಾಡಿ ಠರಾವು ಪಾಸ್ ಮಾಡುತ್ತಿದ್ದರು. "ಮೊದಲು ಹಿಂದೆ ಠರಾವು ಪಾಸ್ ಮಾಡಿದ ಕೆಲಸ ಮಾಡಿಸಿ ತೋರಿಸು. ನಂತರ ಈ ದಿನದ ಠರಾವಿನ ತೀರ್ಮಾನ" ಎಂದು ಗಟ್ಟಿಸಿ ಹೇಳುವ ಎದೆಗಾರಿಕೆ ಕಮಲಮ್ಮ ಬೆಳೆಸಿಕೊಂಡಿದ್ದಾರೆ. ಈ ಹಿಂದೆ ಖರ್ಚು ಮಾಡಿದ ಹಣಕ್ಕೆ ರಶೀದಿ ಕೇಳಿದಾಗಲಂತೂ ಕಾರ್ಯದರ್ಶಿಗೆ ಕಮಲಮ್ಮನ ಮೇಲೆ ಎಲ್ಲಿಲ್ಲದ ಸಿಟ್ಟು. ಇವಳ್ಯಾಕೆ ಆಯ್ಕೆ ಬಂದಳಪ್ಪಾ ಎಂದು ಮನಸ್ಸಿನಲ್ಲಿಯೇ ಶಪಿಸಿರಲೂಬಹುದು ಎನ್ನುತ್ತಾರೆ ಕಮಲಮ್ಮ

ಆದರೆ ಆಯ್ಕೆ ಆಗಿ ಏನೇನು ನಡೀತದೆ ಎಂದು ಕಣ್ಣಾರೆ ಕಂಡ ನಾವೇ ಸುಮ್ಮನಿದ್ದರೆ ತಿಳಿಯಲಾರ್ದ ಉಳಿದ ಹೆಣ್ಣು ಮಕ್ಕಳು ಏನು ಕೇಳ್ಯಾರೆ. ಅವರಿಗೆ ಯಾವಾಗ ನ್ಯಾಯ ಸಿಗುವುದು, ಎಂಬ ಕಳವಳ ಕಮಲಮ್ಮನಿಗಿದೆ. ಆಯ್ಕೆಯಾಗಿ ಬಂದಾಗಿನಿಂದ ಹಲವಾರು ಜನಪರ ಕೆಲಸಗಳನ್ನು ಮಾಡಿದ್ದಾರೆ.

5 ಜನರಿಗೆ ಭಾಗ್ಯಜ್ಯೋತಿ, 5 ಜನರಿಗೆ ಐ.ಆರ್.ಡಿ.ಪಿ. ಯೋಜನೆಯಲ್ಲಿ ಸಾಲ, ಓಣಿಯಲ್ಲಿ ಬೋರ್‌ವೆಲ್, ತಗ್ಗು ಮುಚ್ಚಿಸುವುದು, ಸಂಘ ಮನೆ ಕಟ್ಟಡಕ್ಕೆ 30,000 ರೂ.ವನ್ನು ಅರಣ್ಯ ಇಲಾಖೆಯಿಂದ ಠರಾವು ಪಾಸ್ ಮಾಡಿಸಿದ್ದು ಅದರ ಬಿಡುಗಡೆಗೆ ಪ್ರಯತ್ನ, ಸಮುದಾಯ ಭವನಕ್ಕೆ ಒತ್ತು, ಓಣಿಯಲ್ಲಿ ದ್ವಾಕ್ರಾ ಶೆಡ್, ಟಿ.ವಿ. ವ್ಯವಸ್ಥೆ ಕಲ್ಯಾಣ ಮಂಟಪಕ್ಕೆ ಮಂಜೂರಾತಿ... ಇವೇ ಮುಂತಾದ ಕೆಲಸಗಳನ್ನು ಮಾಡಿದ್ದಾರೆ.

ಜನರಿಂದ ಬೇರೆ ಬೇರೆ ಪ್ರತಿಕ್ರಿಯೆಗಳಿವೆ. ಸೌಲಭ್ಯ ಪಡೆದವರು, "ಹೆಣ್ಣು ಮಗಳು ಆರಿಸಿ ಬಂದಳು, ಮನೆತನ ಮಾಡಿಸಿಕೊಟ್ಟಳು" ಎಂದರೆ ಸೌಲಭ್ಯ ದೊರೆಯದಿದ್ದವರು, ತನಗೆ ಬೇಕಾದವರಿಗೆ ಮಾಡಿಸಿದಳು ಎನ್ನುತ್ತಾರೆ. ಲಗ್ನ, ಕಾರ್ಯ ನ್ಯಾಯ ಬೆಲೆ ಅಂಗಡಿ, ಶಾಲೆ ಸಭೆ, ಧ್ವಜಾರೋಹಣ ಇಂತಹ ಸಮಾರಂಭಗಳಿಗೆ ಕೇರಿಯವರಷ್ಟೇ ಅಲ್ಲದೆ ಊರವರೂ ಕರೀತಾರೆ.

ಪಂಚಾಯ್ತಿ ಸಭೆಗೆ ಹೋಗುವ ಮೊದಲು ಸಂಘದ ಸದಸ್ಯರನ್ನೆಲ್ಲಾ ಸೇರಿಸಿ ಸಭೆ ಮಾಡಿ ಚರ್ಚಿಸಬೇಕಾದಂತಹ ವಿಷಯಗಳ ಬಗ್ಗೆ ಮಾತಾಡಿಕೊಂಡು ಸಭೆ ಮುಗಿದ ಮೇಲೂ ಸಹ ಮತ್ತೆ ಸಂಘ ಸಭೆ ಮಾಡುತ್ತಾರೆ. ಪಂಚಾಯ್ತಿ ಸಭೆಯಲ್ಲಿ ನಡೆದ ಚರ್ಚೆ ಹಾಗೂ ತೀರ್ಮಾನಗಳ ಬಗ್ಗೆ ಮಾಹಿತಿ ಕೊಡುತ್ತಾರೆ.

ಸಮಖ್ಯಾದಿಂದ ತರಬೇತಿ ಪಡೆಯುವಾಗ, "ಸಮಖ್ಯಾ ಕೆಲಸ ಮಾಡುವ ಸಂಘಗಳಿಂದ ಆಯ್ದು ಬಂದ ಸದಸ್ಯರಿಗೆ ತರಬೇತಿ ನೀಡಿದರೆ ಸಾಲದು, ಉಳಿದ ಮಹಿಳಾ ಸದಸ್ಯರಿಗೂ ತರಬೇತಿಯ ಅವಕಾಶ ಮಾಡಿಕೊಡಿ, ಅವರೂ ನಮ್ಮ ಹಾಗೆ ಏನು ತಿಳಿಯದವರು, ಅವರೂ ತಮ್ಮ ಪಾತ್ರ ಮತ್ತು ಜವಾಬ್ದಾರಿಯ ಬಗ್ಗೆ ಅರಿತರೆ ಮಹಿಳೆಯರ ಧ್ವನಿಗೆ ಒಂದು ಶಕ್ತಿ ಬರುತ್ತದೆ" ಎಂದು ಹೇಳುತ್ತಾರೆ.

ಇಷ್ಟೆಲ್ಲಾ ತಿಳುವಳಿಕೆ ಹಾಗೂ ನೈತಿಕ ಬಲ ಹೊಂದಿದ ಕಮಲಮ್ಮನಿಗೆ ಒಮ್ಮೊಮ್ಮೆ ತಮ್ಮ ಮೇಲೆಯೇ ಬೇಸರವಾಗುತ್ತದೆ. ಕಾರಣ, ಸಭೆಯಲ್ಲಿ ಏನಾದರೂ ಓದುವಾಗ, ಬರೆದದ್ದೇ ಓದ್ತಾರೋ, ಅಥವಾ ಬೇರೆ ಏನಾದ್ರೂ ಓದ್ತಾರಾ ಎಂದು ಅನುಮಾನ ಬರುತ್ತದೆ. ಆಗ ತಾನು ಓದಿದ್ದರೆ ಎಷ್ಟು ಚೆನ್ನಾಗಿತ್ತು ಅನಿಸುತ್ತದೆ.

ಸಮುದಾಯ ಭವನದ ಉದ್ಘಾಟನೆಯಾದಾಗ ಉದ್ಘಾಟನಾ ಭಾಷಣದಲ್ಲಿ ತಮ್ಮ ಇಷ್ಟೆಲ್ಲಾ ಸಾಧನೆಗೆ ಕುಟುಂಬದವರ ಹಾಗೂ ಸಂಘ ಸದಸ್ಯರ, ಬೆಂಬಲ ಹಾಗೂ ಸಹಕಾರವೇ ಕಾರಣ ಎನ್ನುತ್ತಾರೆ ಕಮಲಮ್ಮ

ಪ್ರಕರಣ

# ಆರಿಸಿ ಬಂದವಳ ದಬ್ಬಾಳಿಕೆ

ತರಳಳ್ಳಿಯಲ್ಲಿ ಸಂಘದ ಪರವಾಗಿ ಒಬ್ಬರು ಪಂಚಾಯತ್ ಚುನಾವಣೆಗೆ ಸ್ಪರ್ಧಿಸಿದರು. ಮಹಿಳೆಯರು ತಮ್ಮ ಓಟು ಯಾರಿಗೆಂದು ತೇಳಲಿಲ್ಲ, ಯಾರನ್ನೂ ಪುರಸ್ಕರಿಸುವುದು ಬೇಡ. ಯಾರನ್ನೂ ತಿರಸ್ಕರಿಸುವುದು ಬೇಡ ಎಂದು ಸುಮ್ಮನಿದ್ದರು.

ಚುನಾವಣೆ ಹತ್ತಿರ ಬಂದಾಗ, ಸಂಘದ ಅಧ್ಯಕ್ಷಳಾಗಿದ್ದು ಚುನಾವಣೆಗೆ ಸ್ಪರ್ಧಿಸಿದ ಹೊಳೆವ್ವ "ನಾ ಎಲೆಕ್ಷನ್ನಿಗೆ ನಿಂತೀನಿ, ಸಂಘದಲ್ಲಿ ಕಲೀತೀರಿ ಎಂದ ಮ್ಯಾಕೆ ಎಲ್ಲರೂ ನನಗೆ ಓಟು ಹಾಕಬೇಕು, ನಿಮ್ಮ ಅಪ್ಪಗ ಹುಟ್ಟಿದ್ರೆ ಎಲ್ಲರು ನನಗೆ ಹಾಕ್ತೀರಿ, ಯಾಕಂದ್ರ ನಾನು ಸಂಘದ ಅಧ್ಯಕ್ಷಳಾಗಿ ಸಂಘ ಸಣ್ಣದಿತ್ತು, ದೊಡ್ಡದ ಮಾಡಿನಿ" ಎಂದು ಒರಟಾಗಿ ಮಾತಾಡಲು ಎಲ್ಲರಿಗೂ ಸಿಟ್ಟು ಬಂತು. ತಮ್ಮೊಂದಿಗೆ ವಿಶ್ವಾಸದಿಂದಿರುವ ಬಸವ್ವಗೆ ಓಟು ಹಾಕುವುದೆಂದು ನೀರಿಗೆ ಹೋದಾಗ, ಕೂಲಿಗೆ ಹೋದಾಗ ನಿರ್ಧರಿಸಿಕೊಂಡರು. ಬಸವ್ವಗೆ, ತನ್ನ ಗೆಳತಿಯರು ತನಗೆ ಓಟು ಹಾಕುತ್ತಾರೆ, ಹರಕುಬಾಯಿ ಹೊಳೆವ್ವನಿಗೆ ಹಾಕುವುದಿಲ್ಲವೆಂದು ಮನವರಿಕೆಯಾಯಿತು.

ಎಲೆಕ್ಷನ್ ಮುಗಿದು ಹೊಳೆವ್ವನೇ ಆರಿಸಿ ಬಂದಳು. ಆಗಲೂ ಬಸವ್ವ, ಕೇರಿಯಲ್ಲಿ ಹೊಳೆವ್ವನ ಮನೆಯವರ ಹಿಡಿತವಿರುವುದರಿಂದ ಅವಳೆ ಆರಿಸಿ ಬಂದಿದ್ದಾಳೆಂದು ಸುಮ್ಮನಿದ್ದಳು. ಆದರೆ ಹೊಳೆವ್ವ ಬಿಡದೆ,

"ನಾ ಗೆದ್ದರೆ ಏನಾತು. ನೀವು ನನಗೆ ಓಟು ಹಾಕಿಲ್ಲ ಅಂತ ನನಗೆ ಗೊತ್ತದ. ಈಗ ನೀವು ಹೆಂಗ ಸಂಘ ಮಾಡ್ತೀರಿ ನಾ ನೋಡತೀನಿ" ಎಂದು ಪ್ರತಿ ಮೀಟಿಂಗ್‌ನಲ್ಲಿ ಬಂದು ಕಾರಣವಿಲ್ಲದೆ ಜಗಳ ಮಾಡತೊಡಗಿದಳು.

ಇದನ್ನು ಸಹಿಸದ ಮಹಿಳೆಯರು ಅವಳನ್ನು ಸಂಘದಿಂದ ತೆಗೆದು ಹಾಕಿ, ಬೇರೊಬ್ಬ ಮಹಿಳೆಯನ್ನು ಅಧ್ಯಕ್ಷರನ್ನಾಗಿ ಮಾಡಿದರು.



ಪ್ರಕರಣ

# ಎಲ್ಲರಿಗೂ ಕುರ್ಚಿ

ಝೂಲಾಬಾಯಿ ಗ್ರಾಮಪಂಚಾಯತ್ ಎಲೆಕ್ಷನ್ನಿನಲ್ಲಿ ಗೆದ್ದು ಉಪಾಧ್ಯಕ್ಷರಾಗಿದ್ದ ಸಮಯ. ಒಮ್ಮೆ ಗ್ರಾಮಸಭೆ ಇಟ್ಟುಕೊಂಡರು. ಅಲ್ಲಿ ಸುಮಾರು 40 ಜನರು ಭಾಗವಹಿಸಿದರು. ಈ ಸಭೆಯಲ್ಲಿ ಕೂಡುವ ವ್ಯವಸ್ಥೆ ಸ್ವಲ್ಪ ಹೆಚ್ಚು ಕಡಿಮೆ ಇದ್ದಿದ್ದು ಕಂಡಿತು. ಅದು ಹೇಗೆಂದರೆ ಗ್ರಾಮಪಂಚಾಯತ್‌ನಲ್ಲಿ ನಾಲ್ಕು ಕುರ್ಚಿಗಳಿದ್ದವು. ಅದರ ಮೇಲೆ ಬರಿ ಗಂಡಸರು ಮಾತ್ರ ಕುಳಿತುಕೊಂಡು ಮಹಿಳೆಯರಿಗೆ ಕೆಳಗೆ ಕೂಡಲು ಹೇಳಿದರು. ಆವಾಗ ಝೂಲಾಬಾಯಿ ಮತ್ತು ಇತರ ಮಹಿಳೆಯರು, ಗ್ರಾಮಪಂಚಾಯತ್ ಸಭೆಯಲ್ಲಿ ಮಹಿಳೆಯರಿಗೆ ಒಂದು ಸ್ಥಾನ, ಗಂಡಸರಿಗೆ ಒಂದು ಸ್ಥಾನ ಏಕೆ, ಎಲ್ಲರಿಗೂ ಸಮಾನ ಸ್ಥಾನ ಯಾಕೆ ಇಲ್ಲ ಎಂದು ಪ್ರಶ್ನಿಸಿದರು. ಸಮಾನ ಅವಕಾಶ ನಡೆಸಿಕೊಡಬೇಕೆಂದು ತುಂಬಾ ಗಲಾಟೆ ಆಯಿತು. ಹತ್ತಿರದ ಪೋಲೀಸರು ಬಂದರೂ ಸಮಸ್ಯೆಗೆ ಪರಿಹಾರ ಕೊಡಲಿಲ್ಲ, ಶಾಂತಿ, ಸಮಾಧಾನ ಹೇಳಿ ಬಂದರು.

ಮಾರನೇ ದಿನ ಝೂಲಾಬಾಯಿ ಮತ್ತು ಸಂಘ ಮಹಿಳೆಯರು ಒಟ್ಟು ಹತ್ತು ಜನರು ಎ.ಸಿ. ಭೇಟಿ ಮಾಡಿ ಅರ್ಜಿ ಕೊಟ್ಟು, ಗ್ರಾಮಸಭೆಗೆ ಬರುವಂತೆ ತಿಳಿಸಿದರು. ಆ ಸಾರಿ ಎ.ಸಿ., ಸೆಕ್ರೆಟರಿ, ತಹಶೀಲ್ದಾರ, ಬಿ.ಡಿ.ಓ ಹಾಗೂ ಡಿ.ಸಿ.ಯವರೂ ಸಭೆಗೆ ಬಂದಿದ್ದರು. ಬರುವಾಗ, ಈ ಹಿಂದೆ ಮಹಿಳೆಯರಿಗೆ ಕೂಡುವ ವಿಷಯದಲ್ಲಿ ನಡೆದ ಅನ್ಯಾಯದ ಬಗ್ಗೆ ಚರ್ಚೆ ನಡೆಯುತ್ತಿತ್ತು. ಕುರ್ಚಿಗಳು ಕಡಿಮೆ ಇದ್ದ ಸಲುವಾಗಿ ಈ ರೀತಿ ಮಾಡಿದೆವೆಂದು ಅಧ್ಯಕ್ಷರು ಹೇಳಿದರು.

ಡಿ.ಸಿ.ಯವರು "ಕುರ್ಚಿ ಕಡಿಮೆ ಇದ್ದರೆ ಎಲ್ಲರೂ ನೆಲದಲ್ಲಿ ಕೂಡಬೇಕಾಗಿತ್ತು, ಎಲ್ಲರೂ ಸಮನಾಗಿ ಕೂಡಬೇಕು" ಎಂದರು. ಅಂದು 50 ಜನ ಮಹಿಳೆಯರು ಒಟ್ಟು ಸೇರಿ ಈ ಅಸಮಾನತೆಯನ್ನು ಪ್ರಶ್ನಿಸಿದ್ದರು.

ಪುನಃ ಗ್ರಾಮಸಭೆ ಸೇರಿದಾಗ ಪ್ರತಿಯೊಬ್ಬರಿಗೂ ಕುರ್ಚಿ ತರಿಸಿದರು. ಸಮಾನವಾಗಿ ಕುಳಿತು, ಖುಶಿಯಿಂದ ಸಭೆ ಮಾಡಿದರು ಈ ವ್ಯವಸ್ಥೆ ಹೀಗೇ ಮುಂದುವರಿಯಿತು.



# ಗಾದೆಗೊಂದು ಗುದ್ದು...

20 ವಿಷಯ : ಗಾದೆಗಳಲ್ಲಿ ಮಹಿಳಾ ವಿಚಾರ

**ಕನಿಷ್ಠ ಸಮಯ :**

1 ಗಂ. 30 ನಿ.

**ತಯಾರಿ :**

* ಗಾದೆಗಳ ಪಟ್ಟಿ ಮಾಡಿ ಇಟ್ಟುಕೊಳ್ಳಿ.
* ದೊಡ್ಡ ಹಾಳೆಯಲ್ಲಿ ದೊಡ್ಡ ಅಕ್ಷರಗಳಲ್ಲಿ ಗಾದೆಗಳನ್ನು ಬರೆದಿರಿಸಿದರೆ ಗುಂಪಿಗೆ ತೋರಿಸಲು ಅನುಕೂಲ.

**ಆಡಕ :**

'ಗಾದೆಗಳ ಪಟ್ಟಿ' ಪುಟ - 53

'ಹೊಸ ಆಲೋಚನೆಯ ಮಾತುಗಳ ಪಟ್ಟಿ' - 54

**ಉದ್ದೇಶ :**

* ಮಹಿಳೆಯರನ್ನು ದಮನಿಸುವ ವಿಚಾರಗಳು ಯಾವ ರೀತಿಯಲ್ಲಿ ಗಾದೆಗಳಲ್ಲಿ ಕಂಡು ಬರುತ್ತದೆ ಎಂಬುದು ಅರ್ಥ ಮಾಡಿಕೊಳ್ಳುವುದು.
* ಗಾದೆಗಳನ್ನು ವಿಶ್ಲೇಷಿಸುತ್ತಾ ಅದರ ಸತ್ಯ ಅಸತ್ಯತೆಗಳನ್ನು ಗುರುತಿಸಿ ಹೊಸ ಚಿಂತನೆಗಳನ್ನು ಸಾರುವ "ಮಾತುಗಳನ್ನು" ಗಮನಿಸುವುದು ಮತ್ತು ಹುಟ್ಟು ಹಾಕುವುದು.

**ಚಟುವಟಿಕೆ :**

* ಗಾದೆ ಮಾತುಗಳ ಬಗ್ಗೆ ಮಹಿಳೆಯರಲ್ಲೇ ವಿಚಾರಿಸಿ. ಅವರಿಗೆ ತಿಳಿದಿರುವುದನ್ನು ಸಂಗ್ರಹ ಮಾಡಿ. (15 ನಿ.)
* 2 ಅಥವಾ 3 ಜನರ ಸಣ್ಣ ಗುಂಪುಗಳನ್ನು ಮಾಡಿ ಅವರ ಕೈಯಲ್ಲಿ ನೀವು ಮೊದಲೇ ಪಟ್ಟಿ ಮಾಡಿಕೊಂಡಿರುವ ಗಾದೆಗಳನ್ನು ಅವರಿಗೆ ಕೊಡಿ, ಸ್ವಲ್ಪ ಕಾಲ ಅವರೇ ಚಿಂತನೆ ನಡೆಸಲಿ. ಗಾದೆಯ ಅರ್ಥ ಏನು, ಅದರಿಂದ ಮಹಿಳೆಯರ ಮೇಲೆ ಯಾವ ಪರಿಣಾಮ ಬೀರುತ್ತದೆ ಎಂದು ಚರ್ಚಿಸಲಿ.
* ದೊಡ್ಡ ಗುಂಪಿನಲ್ಲಿ ಸೇರಿ ಒಂದೊಂದೇ ಗಾದೆಯನ್ನು ಎತ್ತಿಕೊಂಡು ಚರ್ಚೆ ಮಾಡಿ. ಆ ಗಾದೆಗಳು ಮಹಿಳೆಯರಿಗೆ ಯಾವ ಯಾವ ಸಂಪನ್ಮೂಲಗಳ ಮೇಲೆ ಅಧಿಕಾರ ಸಿಗದಂತೆ ಮಾಡುತ್ತದೆ, ಹೇಗೆ ಮಹಿಳೆಯರನ್ನು ಚೌಕಟ್ಟಿನ ಒಳಗೆ ಇಡುತ್ತದೆ ಇವೇ ವಿಚಾರವಾಗಿ ಚರ್ಚೆ ಮಾಡಿ.
* ಹೊಸ ಆಲೋಚನೆ ಕೊಡುವಂತಹ ಕೆಲವು ಮಾತುಗಳನ್ನು ಪರಿಚಯಿಸಿ. ಉದಾ. : "ಮಗಳಿಗೆ ಆಭರಣ ಬೇಡ, ವಿದ್ಯೆ ಕೊಡಿ"

**ಗಮನಿಸಬೇಕಾದ ಅಂಶ :**

* ನಿಮಗೆ ಖಚಿತವಾಗಿ ವಿಶ್ಲೇಷಣೆ ಮಾಡುವುದಕ್ಕೆ ಆಗುವ ಗಾದೆಗಳನ್ನು ಮಾತ್ರ ಚರ್ಚೆಗೆ ಎತ್ತಿಕೊಳ್ಳಿ. ಇಲ್ಲವಾದರೆ, ಗೊಂದಲವಾಗಬಹುದು.

**ನಿರೀಕ್ಷಿತ ಫಲಿತಾಂಶ :**

* ಗಾದೆಗಳು ಮನುಷ್ಯರದ್ದೇ ಸೃಷ್ಟಿ. ಅವುಗಳನ್ನು ನಂಬಿಕೊಳ್ಳಲೇ ಬೇಕಾಗಿಲ್ಲ, ಪರೀಕ್ಷಿಸಿ ನೋಡಬಹುದು ಎಂಬ ಆಲೋಚನೆ ಹುಟ್ಟಬೇಕು.
* ಹೊಸ ಸಂದೇಶಗಳನ್ನು ಅವರದ್ದೇ ಭಾಷೆಗಳಲ್ಲಿ ಹುಟ್ಟುಹಾಕುವ ಪ್ರಯತ್ನ ಅವರೊಳಗೆ ನಡೆಯಬೇಕು.

**ವೈಯಕ್ತಿಕ ಟಿಪ್ಪಣಿ :**

# ಗಾದೆಗಳು

- ಹೆಣ್ಣೇ ಹೆಣ್ಣಿಗೆ ಶತ್ರು.
- ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ.
- ಕೊಟ್ಟ ಹೆಂಗಸು, ಕುಲಕ್ಕೆ ಹೊರಗೆ.
- ಗಂಡಸು ಕುಳಿತು ಕೆಟ್ಟ, ಹೆಂಗಸು ತಿರುಗಿ ಕೆಟ್ಟಳು.
- ಹೆಂಗಸರ ಕೈಯಲ್ಲಿ ಹಣ, ಗಂಡಸರ ಕೈಯಲ್ಲಿ ಕೂಸು ಉಳಿಯಲಾರದು.
- ಉದ್ಯೋಗ ಪುರುಷನಿಗೆ ಲಕ್ಷಣ.
- ಹೆಂಗಸು ಮಣ್ಣಿನ ಮಡಕೆಯಂತೆ, ಏಟು ಬಿದ್ದರೆ ಒಡೆದೇ ಹೋಗುತ್ತದೆ.
  ಗಂಡಸು ತಾಮ್ರದ ಪಾತ್ರೆಯಂತೆ, ಏಟು ಬಿದ್ದಾಗ ಸ್ವಲ್ಪ ಜಜ್ಜಿ ಹೋಗುತ್ತದೆ.
- ತಾಯಿಯೇ ಮೊದಲ ಗುರು.
- ಒಲೆ ಮುಂದೆ ಊದ್ದಂಗಲ್ಲ, ರಾಗಿ ಮುದ್ದೆ ತಿರುವಿದಂಗಲ್ಲ.
- ಗಂಡಸಿಲ್ಲದ ಹೆಂಗಸಿಗೆ ಬಾಲ್ಯ, ಯೌವನ, ಮುಪ್ಪಿಲ್ಲ.
- ಆರತಿಗೆ ಹೆಣ್ಣು ಕೀರ್ತಿಗೆ ಗಂಡು.
- ನಗುವ ಹೆಣ್ಣ ನಂಬಬಾರದು, ಅಳುವ ಗಂಡಸನ್ನು ನಂಬಬಾರದು.

(ನಿಮ್ಮ ಪ್ರದೇಶದ್ದು ಯಾವುದಾದರೂ ಇದ್ದರೆ ಸೇರಿಸಿಕೊಳ್ಳಿ.)

# ಹೊಸ ಚಿಂತನೆಗಳು

- ಕಲಿತನಾರಿ ಪ್ರಗತಿಗೆ ದಾರಿ.
- ನಿಮ್ಮ ಮಗಳಿಗೆ ಆಭರಣ ಬೇಡ, ವಿದ್ಯೆ ಕೊಡಿ.
- ಈ ಜಗತ್ತನ್ನು ಹೊತ್ತವರು ನಾವು, ಹೆತ್ತವರು ನಾವು - ಹೆಂಗಸರು
- ಹೆಣ್ಣಾಗಿ ಹುಟ್ಟಿದ್ದಕ್ಕಾ... ಕಣ್ಣಾಗ ನೀರ್ಯಾಕ ?
- ಗಂಡಿನ ನೆರಳಲ್ಲಿ ಕಾಣುವ ಹೆಣ್ಣು ನಿಜವಾದ ಹೆಣ್ಣಲ್ಲ



# ಚಲನೆಯ ರಂಗೋಲಿ

21 ವಿಷಯ : 'ಚಲನೆ ಶೀಲತೆ' ಮೇಲೆ ಅಧಿಕಾರ

**ಕನಿಷ್ಠ ಸಮಯ :**

20 ನಿ. + 40 ನಿ.

**ಬೇಕಾಗುವ ಸಾಮಾಗ್ರಿ :**

ಛಾರ್ಟ್ ಪೇಪರುಗಳು, ಸ್ಕೆಚ್ ಪೆನ್ನುಗಳು, ಕತ್ತರಿ, ಗಂ ಟೇಪ್.

**ತಯಾರಿ :**

ಚಾರ್ಟನಲ್ಲಿ ಹಳ್ಳಿ ನಕ್ಷೆ ಹಾಕಿ ಇಟ್ಟಿರಬೇಕು.

**ಆಡಕ :**

'ಹಳ್ಳಿಯೊಂದರ ನಕ್ಷೆ' ಪುಟ - 55

**ಉದ್ದೇಶ :**

* ಚಲನಶೀಲತೆಯೂ ಒಂದು ಸಂಪನ್ಮೂಲ. ಇದರ ಮೇಲೆ ಅಧಿಕಾರವೂ ಶಕ್ತಿ ಕೊಡುತ್ತದೆ.
* ಮಹಿಳೆಯರನ್ನು ನಿರಾಳವಾಗಿ ಚಲಿಸುವುದಕ್ಕೆ ಅವಕಾಶ ಕೊಡದಿರುವಂತಹ ವಾತಾವರಣವಿದೆ. ಇದೂ ಒಂದು ಚೌಕಟ್ಟು ಎಂಬುದನ್ನು ಅರ್ಥಮಾಡಿಕೊಳ್ಳುವುದು.

**ಚಟುವಟಿಕೆ :**

* 4 - 5 ಜನರ ಗುಂಪುಗಳನ್ನು ಮಾಡಿ.
* ಪ್ರತಿಯೊಂದು ಗುಂಪಿಗೆ ಹಳ್ಳಿಯ ನಕ್ಷೆಯೊಂದನ್ನು ಮಾಡಿರುವಂತಹ ಚಾರ್ಟ್ ಪೇಪರನ್ನು ಕೊಡಿ. ಈ ನಕ್ಷೆಯಲ್ಲಿ ಒಂದು ಮೂಲೆಯಲ್ಲಿ 'ವಸತಿ'ಯನ್ನು ಸೂಚಿಸಿ. ಉಳಿದಂತೆ ಸಾಧಾರಣವಾಗಿ ಹಳ್ಳಿಯಲ್ಲಿ ಕಾಣುವ ಎಲ್ಲಾ ಜಾಗಗಳನ್ನು (ಹೊಲ, ಬಾವಿ, ಬೋರ್‌ವೆಲ್, ಶಾಲೆ, ಪಂಚಾಯ್ತಿ, ಊರಿನ ನ್ಯಾಯಕಟ್ಟೆ, ಆಸ್ಪತ್ರೆ, ಹೋಟೇಲು, ಅಂಗಡಿಗಳು, ದೇವಾಲಯ ಇತ್ಯಾದಿ) ಸೂಚಿಸಿ. ಚಾರ್ಟ್‌ನ ಮೂಲೆಯಲ್ಲಿ ತಾಲೂಕು, ಮತ್ತು ಜಿಲ್ಲೆಯನ್ನೂ ಸೂಚಿಸಿ.
* ಈ ನಕ್ಷೆಯೊಂದಿಗೆ ಪ್ರತಿಯೊಂದು ಗುಂಪಿಗೆ ಕೆಂಪು, ಹಸಿರು ಮತ್ತು ನೀಲಿ ಬಣ್ಣದ ಸ್ಕೆಚ್‌ಪೆನ್ನುಗಳನ್ನು ಕೊಡಿ.
* ಮಹಿಳೆಯರು ಹಳ್ಳಿಯಲ್ಲಿ ಯಾವ ಯಾವ ಜಾಗಗಳಿಗೆ ಒಂಟಿಯಾಗಿ ನಿರಾತಂಕವಾಗಿ ಹೋಗುತ್ತಾರೆ, ಯಾವ ಜಾಗಗಳಿಗೆ ಯಾರಾದರೂ ಜತೆಗಿದ್ದುಕೊಂಡೇ ಹೋಗುತ್ತಾರೆ ಮತ್ತು ಯಾವ ಜಾಗಗಳಿಗೆ ಜತೆಗಿದ್ದರೂ ಹೋಗುವುದು ತೀರಾ ಕಡಿಮೆ ಎಂಬುದನ್ನು ಚರ್ಚಿಸಲಿ. ಸಾಧಾರಣವಾಗಿ ಒಂದು ಒಮ್ಮತಕ್ಕೆ ಬರಲಿ. ಅಂದರೆ ಹೆಚ್ಚು ಜನ ಮಹಿಳೆಯರು ಇರುವ, ಓಡಾಡುವ ರೀತಿಯನ್ನು ಗಮನಿಸಿ ಚರ್ಚಿಸಲಿ.
* ಚರ್ಚಿಸುವಂತೆಯೇ ವಸತಿಯಿಂದ
- ಒಂಟಿಯಾಗಿ ನಿರಾತಂಕವಾಗಿ ಹೋಗುವ ಜಾಗಗಳಿಗೆ, ಕೆಂಪುಬಣ್ಣದಿಂದ ಗೆರೆ ಹಾಕಲಿ.
- ಜತೆಗಿದ್ದುಕೊಂಡು ಹೋಗುವ ಕಡೆ ಹಸಿರು ಬಣ್ಣದಿಂದ ಗೆರೆ ಹಾಕಲಿ ಮತ್ತು
- ತೀರಾ ಕಡಿಮೆ ಹೋಗುವ ಜಾಗಗಳಿಗೆ ನೀಲಿ ಬಣ್ಣದಿಂದ ಗೆರೆ ಹಾಕಲಿ.
* ಪ್ರತಿಯೊಂದು ಗುಂಪಿನವರು ಮಾಡಿದ ಚಾರ್ಟನ್ನು ಎಲ್ಲರಿಗೂ ಕಾಣಿಸುವಂತೆ ಹರವಿ ಇಡಿ, ಅಥವಾ ಗೋಡೆ ಮೇಲೆ ಅಂಟಿಸಿ.
* ಮಹಿಳೆಯರು ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳಲಿ. ಅದರ ಮೇಲೆ ಚರ್ಚೆ ನಡೆಸಿ. ಒಂಟಿಯಾಗಿ ಹೋಗಬಹುದಾದಂತಹ ಜಾಗಗಳು ಯಾವುವು, ಜತೆಗಿದ್ದು ಹೋಗುವುದು ಯಾವ ಜಾಗಗಳಿಗೆ, ತೀರಾ ಕಡಿಮೆ ಎಲ್ಲಿಗೆ ಎಂಬುದನ್ನು ಕ್ರೋಢೀಕರಿಸಿ ನೋಡಿ. ಅದರಲ್ಲೇ ಯಾವುದಾದರೂ ಅಂಶಗಳು ಗೋಚರಿಸುತ್ತವೆಯೋ ನೋಡಿ.
* ಸಂಘ ಅನುಭವದಿಂದಾಗಿ, ಧಾರಾಳವಾಗಿ ಓಡಾಡತೊಡಗಿದವರಾಗಿದ್ದರೆ ಹಿಂದಿನ ನೆನಪನ್ನು ಕೆದಕಿ.
* ಚಲನೆಯಲ್ಲಿ ಇರುವ ಅಡ್ಡಿ ಆತಂಕಗಳು, ಹುಟ್ಟಿನಿಂದ ಆ ಕಡೆ ಈ ಕಡೆ ಹೋಗದಿರುವಂತೆ ತರಬೇತಿ, ಬೆಳೆದ ಮೇಲೆ ಹೆದರಿಕೆ, ಶೀಲದ ದೊಡ್ಡ ಕಟ್ಟುಪಾಡು, ತಿಂಗಳ ದಿನಗಳಲ್ಲಿ ಕೆಲವು ನಿರ್ಬಂಧಗಳು ಎಲ್ಲವನ್ನೂ ಚರ್ಚಿಸಿ. ಚಲನೆಗೆ ಅವಕಾಶವಿಲ್ಲದೆ ತಿಳಿಯಲು, ಕಲಿಯಲು ಹೇಗೆ ಅವಕಾಶ ಕಡಿಮೆಯಾಯಿತು ಎಂಬುದನ್ನು ಗುರುತಿಸಿ ಚರ್ಚಿಸಿ.

* ಮಹಿಳೆಯರು ಸುತ್ತಾಡುವಾಗಲೂ ಹೇಗೆ ಅನಿವಾರ್ಯಕ್ಕಾಗಿ, ಕೆಲಸಕ್ಕಾಗಿ ಅಥವಾ ಪುರುಷರ ಒಪ್ಪಿಗೆಗೆ ಅನುಗುಣವಾಗಿ ಇರಬೇಕಾಗುತ್ತದೆ. ಅದೇ ಪುರುಷರ ಚಲನಶೀಲತೆ ಹೇಗಿರುತ್ತದೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿ ಚರ್ಚಿಸಿ.
* "ಹೆಂಗಸು ತಿರುಗಿ ಕೆಟ್ಟಳು, ಗಂಡಸು ಕೂತು ಕೆಟ್ಟ" ಗಾದೆಯನ್ನು ಚರ್ಚಿಸಿ.

ಗಮನಿಸಬೇಕಾದ ಅಂಶ :

* ಸರಿಯಾಗಿ ಚಾರ್ಟ್ ಮಾಡಿದರೆ 'ಚಲನೆಯ ಚಿತ್ರಣ' ಕಣ್ಣಿಗೆ ಕಟ್ಟಿದ ಹಾಗೆ ಸಿಗಬಹುದು. ಆದರೆ ಚಾರ್ಟ್ ಸರಿಯಾಗಿ ಬಾರದೇ ಹೋದರೂ ಮುಖ್ಯ ಅಂಶಗಳನ್ನು ಇಟ್ಟುಕೊಂಡು ಚರ್ಚೆ ನಡೆಸಿ. ಇಲ್ಲಿ ಚರ್ಚೆ ಮುಖ್ಯ.

ನಿರೀಕ್ಷಿತ ಫಲಿತಾಂಶ :

* ಚಲನೆಯ ಶಕ್ತಿ ಏನೆಂಬುದು ಗಮನಕ್ಕೆ ಬರಬೇಕು.
* ಅದರ ನಿಯಂತ್ರಣ ಹೇಗೆ ನಡೆದಿದೆ ಎಂಬುದರ ಅಂದಾಜು ಸಿಗಬೇಕು.
* ಜತೆ ಸೇರಿ ಚಲಿಸಬಹುದು ಎಂಬ ಭರವಸೆ ಹುಟ್ಟಬೇಕು.

## ಹಳ್ಳಿಯೊಂದರ ನಕ್ಷೆ

(ಇದು ಮಾದರಿಗಾಗಿ ಮಾತ್ರ. ಇದನ್ನೇ ಉಪಯೋಗಿಸಬೇಡಿ. ದೊಡ್ಡ ಹಾಳೆ ಉಪಯೋಗಿಸಿ.)



# ಚಲನೆಯ ರಂಗೋಲಿ

(ಇನ್ನೊಂದು ಸಾಧ್ಯತೆ)

ಚಟುವಟಿಕೆ :

* ಈ ಕೆಳಗೆ ನೀಡಿರುವ ಪಟ್ಟಿಯನ್ನು ಪ್ರತಿಯೊಬ್ಬ ಮಹಿಳೆಗೂ ಕೊಟ್ಟು ಅವರ ಉತ್ತರ ಪಡೆದುಕೊಳ್ಳಿ. ಉತ್ತರ ಹಾಕುವುದಕ್ಕೆ ನಿಮ್ಮ ಸಹಕಾರ ಬೇಕಾದೀತು. ಎಲ್ಲರ ಉತ್ತರವನ್ನು ಮಹಿಳೆಯರ ಎದುರೇ ಬೋರ್ಡಿನಲ್ಲಿ ಕ್ರೋಢೀಕರಿಸಿ, ಆಮೇಲೆ ಚಲನಶೀಲತೆಗೆ ಸಂಬಂಧಿಸಿದಂತೆ ಮೇಲೆ ಹೇಳಿದ ಅಂಶಗಳನ್ನೇ ಇಟ್ಟುಕೊಂಡು ಚರ್ಚೆ ನಡೆಸಿ.
* ಯಾವ ಜಾಗಗಳಿಗೆ ಸಲೀಸಾಗಿ ಹೋಗುತ್ತಾರೆ, ಯಾಕೆ, ಇದೇ ಸ್ಥಳಗಳಿಗೆ ಪುರುಷರ ಚಲನೆ ಹೇಗಿರುತ್ತದೆ, ಎಂಬ ವಿಚಾರದ ಮೇಲೆ ಚರ್ಚೆ ನಡೆಯಲಿ.
* ಮಹಿಳೆಯರ ಚಲನೆಗೆ ಇರುವ ಬೇರೆ ಬೇರೆ ಅಡ್ಡಿಗಳನ್ನು ಗುರುತಿಸಿ. ಜಾತಿ ಕಟ್ಟುಪಾಡು ಆಗಿರಬಹುದು. ತಿಂಗಳ (ಮುಟ್ಟು) ದಿನಗಳಾಗಿರಬಹುದು, ವಯಸ್ಸು, ಬಡತನ ಇರಬಹುದು.
* ಹುಟ್ಟಿನಿಂದ, ಬೆಳೆಯುತ್ತಾ ಹೋದಂತೆ ಚಲನೆಯನ್ನು ತಡೆಗಟ್ಟುತ್ತಾ ಬರುವ ವಿಚಾರ ಗಮನಿಸಿ.

ಯಾರೊಂದಿಗೆ ಹಾಗೂ ಯಾವಾಗಲಾದರೂ, ನೀವು ಈ ಕೆಳಗೆ ಕೊಟ್ಟಿರುವ ಜಾಗಗಳಿಗೆ ಭೇಟಿ ನೀಡಿದ್ದೀರಾ ?

ಕೆಳಗೆ ನೀಡಿರುವ ಕೋಡ್‌ಗಳನ್ನು ಗಮನಿಸಿ, ಅದರಂತೆ ಹಾಕಿ.
ಉದಾ. : ನಮ್ಮ ಜಿಲ್ಲೆಗೆ 'ಹೋಗೇ ಇಲ್ಲ' ವೆಂದಾದರೆ ಕೋಡ್ ನಂ. 1 ಹಾಕಬೇಕು. ☐

| | | | |
|---|---|---|---|
| ಎ) ಹೊಲಗದ್ದೆ / ಕೆಲಸದ ಜಾಗಕ್ಕೆ | ☐ | ಹೆಚ್) ಮಹಿಳಾ ಮಂಡಲ್ / ಸಂಘ | ☐ |
| ಬಿ) ಸೌದೆ ಆರಿಸಲು | ☐ | ಐ) ಸಂತೆ / ಮಾರ್ಕೆಟ್ | ☐ |
| ಸಿ) ದನಕರು / ಕುರಿ ಮೇಯಿಸಲು | ☐ | ಜೆ) ಶಾಲೆಗೆ | ☐ |
| ಡಿ) ಚಹಾ ಅಂಗಡಿ | ☐ | ಕೆ) ಪಂಚಾಯಿತಿ ಕಛೇರಿಗೆ | ☐ |
| ಇ) ಸಿನೆಮಾ ಮಂದಿರ / ಟೆಂಟ್ | ☐ | ಎಲ್) ಆರೋಗ್ಯ ಕೇಂದ್ರ / ದವಾಖಾನೆ | ☐ |
| ಎಫ್) ರೇಷನ್ ಅಂಗಡಿ / ನ್ಯಾಯ ಬೆಲೆ ಅಂಗಡಿ | ☐ | ಎಮ್) ನಮ್ಮ ತಾಲೂಕಿಗೆ | ☐ |
| ಐ) ತವರು / ತಾಯಿಯ ಮನೆ | ☐ | ಎನ್) ನಮ್ಮ ಜಿಲ್ಲೆಗೆ | ☐ |

ಒ) ಬೇರೆ ಕಡೆಗೆ (ಸ) ______________________________

| ಯಾರೊಂದಿಗೆ | ಕೋಡ್ | ಯಾರೊಂದಿಗೆ | ಕೋಡ್ |
|---|---|---|---|
| ಹೋಗೆ ಇಲ್ಲ | 1 | ಹೋಗಿದ್ದೆ, ಬೇರೆ ಮಹಿಳಾ ಸಂಬಂಧಿಯೊಂದಿಗೆ | 4 |
| ಹೋಗಿದ್ದೆ, ಒಬ್ಬಳೇ | 2 | ಹೋಗಿದ್ದೆ, ಬೇರೆ ಪುರುಷ ಸಂಬಂಧಿಯೊಂದಿಗೆ | 5 |
| ಹೋಗಿದ್ದೆ ಬೇರೆ ಮಹಿಳೆ / ಸ್ನೇಹಿತೆಯೊಂದಿಗೆ | 3 | ಇತರರು (ಸ) ಉದಾ : ಕುಟುಂಬ | 6 |

NIAS (National Institute of Advanced Studies) ಬೆಂಗಳೂರು ಇವರು ತಯಾರಿಸಿದ ಪ್ರಶ್ನಾವಳಿಯಿಂದ ಈ ಚಟುವಟಿಕೆಯನ್ನು ಆಯ್ದುಕೊಳ್ಳಲಾಗಿದೆ.

# ಬದಲಾದ ನೋಟಗಳು

22 ವಿಷಯ : ಬದಲಾದ ನೋಟಗಳು

**ಕನಿಷ್ಠ ಸಮಯ :**

**ಬೇಕಾಗುವ ಸಾಮಾಗ್ರಿ :**

ಹೊಸನೋಟಗಳ, ಒಂದು ಚಿತ್ರಗಳ ಅಥವಾ ಭಾವಚಿತ್ರಗಳ ಸಂಗ್ರಹ.

**ತಯಾರಿ :**

ಬದಲಾದ ನೋಟಗಳ ದೀರ್ಘವಾದ ಪಟ್ಟಿಯನ್ನು ಮುಂಚಿತವಾಗಿ ತಯಾರಿಸಬೇಕು.

**ಅಡಕ :**

'ಬದಲಾದ ನೋಟಗಳ ಚಿತ್ರಗಳು' ಪುಟ - 57, 59, 60, 61

**ಉದ್ದೇಶ :**

* ಮಹಿಳೆಯರ ಬದುಕಿನಲ್ಲಿ ಆದ ಬದಲಾವಣೆಯನ್ನು ತೋರಿಸುವಂತಹ ನೂರಾರು ದೃಶ್ಯಗಳನ್ನು ಗುರುತಿಸಿ, ಅದರ ಮಹತ್ವವನ್ನು ವಿಮರ್ಶಿಸುವುದು.

**ಚಟುವಟಿಕೆ :**

* ಮಹಿಳೆಯರು ಎಂತೆಂತಹಾ ಬದಲಾವಣೆಯ ದೃಶ್ಯಗಳನ್ನು ಗಮನಿಸಿದ್ದಾರೆ ಎಂಬುದನ್ನು ಅವರಿಂದಲೇ ಕೇಳಿ ತಿಳಿದುಕೊಳ್ಳಿ. ಅವರಿಗೆ ನೆನಪಾಗದಿದ್ದರೆ ಮಹಿಳೆಯರು ಧ್ವಜಾರೋಹಣ ಮಾಡುವುದು, ಪೇಪರ್ ಓದುವುದು, ಗಂಡಸರು ಮಕ್ಕಳನ್ನು ನೋಡಿಕೊಳ್ಳುವುದು, ಇತ್ಯಾದಿ ಕೆಲವನ್ನು ನಿಧಾನವಾಗಿ ಹೇಳಿ ಅವರು ನೆನಪಿಸಿಕೊಳ್ಳುವಂತೆ ಸಹಕರಿಸಿ.
* ಈ ಬದಲಾವಣೆ ಬಗ್ಗೆ ಏನನ್ನಿಸುತ್ತದೆ, ಇದರಿಂದ ಮಹಿಳೆಯರ ಮೇಲೆ ಆದ ಪರಿಣಾಮವೇನು, ಈ ಹೊಸ ನೋಟಗಳ ಬಗ್ಗೆ ಅವರ ಅನಿಸಿಕೆ ಏನು ಎಂಬುದನ್ನು ಚರ್ಚಿಸಿ.

**ಗಮನಿಸಬೇಕಾದ ಅಂಶಗಳು :**

* ಈಗಾಗಲೇ ಸಂಘ ಪ್ರಕ್ರಿಯೆಯಲ್ಲಿ ಕೆಲ ಸಮಯದಿಂದ ಒಳಗೊಂಡ ಮಹಿಳೆಯರಾದರೆ ಬದಲಾದ ನೋಟಗಳನ್ನು ಗುರುತಿಸುವುದು ಸುಲಭ, ಇಲ್ಲವಾದರೆ ನೀವೇ ಚಿತ್ರ ಅಥವಾ ಭಾವಚಿತ್ರಗಳ ಮೂಲಕ ತೋರಿಸಿ ಅವರ ಗಮನ ಸೆಳೆಯಬೇಕು.
* ಇಲ್ಲಿ ಬೇರೆ ಯಾವ ವಿವರಣೆ, ಕಥೆಗಳು ಬೇಕಾಗಿಲ್ಲ, ಕಣ್ಣಿಗೆ ಕಾಣುವ ಹೊಸ ನೋಟಗಳನ್ನು ಕಣ್ಣಿಗೆ ಕಂಡಂತೆ ಹೇಳಬೇಕು ಅಷ್ಟೆ.

**ನಿರೀಕ್ಷಿತ ಫಲಿತಾಂಶ :**

* ಮಹಿಳೆಯರ ಸಂಘ ಪ್ರಕ್ರಿಯೆ ಹೊಸನೋಟಗಳನ್ನು ಸೃಷ್ಟಿಸಿದೆ, ಎಂಬುದನ್ನು ಗಮನಿಸುವುದು.
* ಇದು ಮಹಿಳೆಯರ ಸ್ವಪ್ರತೀಕವನ್ನು ಬದಲಾಯಿಸುತ್ತದೆ. ಸಮಾಜವೂ ಈ ಮಹಿಳೆಯರನ್ನು ಹೊಸ ರೀತಿಯಲ್ಲಿ ನೋಡುತ್ತದೆ ಎಂಬುದನ್ನು ಅರ್ಥ ಮಾಡಿಕೊಳ್ಳುವುದು.

**ವೈಯಕ್ತಿಕ ಟಿಪ್ಪಣಿ :**

# ಸಂಘದ ಹೆಜ್ಜೆಗಳು

23 ವಿಷಯ : ಸಂಘ ಪ್ರಕ್ರಿಯೆ, ಲಿಂಗತ್ವ

ಕನಿಷ್ಠ ಸಮಯ :

1 ಗಂ.

ಅಡಕ :

'ಸೂಚಕಗಳು' ಪುಟ - 63

ಉದ್ದೇಶ :

* ಸಂಘಗಳು ಹೇಗಿವೆ. ಲಿಂಗತ್ವದ ವಿಚಾರದಲ್ಲಿ ಕೆಲಸ ನಡೆದಿದೆಯೇ, ಎಂತಹ ಬದಲಾವಣೆಗಳು ಆಗಿವೆ ಎಂಬುದನ್ನು ಅರ್ಥಮಾಡಿಕೊಳ್ಳುವುದು.
* ಅರ್ಥಮಾಡಿಕೊಂಡ 'ಹೊಸ ಆಲೋಚನೆಗಳು' ಸಂಘಗಳಲ್ಲಿ ಅಳವಡಿಸುವುದರ ಬಗ್ಗೆ ಚಿಂತನೆ ನಡೆಸುವುದು.

ಚಟುವಟಿಕೆ :

* 4 - 5 ಜನರಿರುವ ಸಣ್ಣಗುಂಪುಗಳನ್ನು ಮಾಡಿ. (ಒಂದೊಂದು ಹಳ್ಳಿಯವರು ಒಂದೇ ಗುಂಪಿನಲ್ಲಿದ್ದರೆ ಬಹಳ ಒಳ್ಳೆಯದು.)
* ಈ ಗುಂಪುಗಳಲ್ಲಿ ಅವರು ತಮ್ಮ ತಮ್ಮ ಸಂಘಗಳ ಬಗ್ಗೆ ಚರ್ಚೆ ನಡೆಸಲಿ. ಈ ತರಬೇತಿಯಲ್ಲಿ ಗಮನಿಸಿದ ಯಾವ ಅಂಶಗಳು ಅವರ ಸಂಘದಲ್ಲಿ ಇವೆ, ಇದ್ದರೆ ಯಾವ ಮಟ್ಟದಲ್ಲಿ ಇವೆ, ಇಲ್ಲವಾದರೆ ಯಾಕೆ ಇಲ್ಲ, ಏನಾಗಬೇಕಿದೆ ಎಂಬುದನ್ನು ಚರ್ಚಿಸಲಿ ಚರ್ಚೆಗೆ ಅನುಕೂಲವಾಗುವಂತೆ ಅಂಶಗಳ ಒಂದು ಪಟ್ಟಿ ತಯಾರಿಸಿ ಕೊಟ್ಟರೆ ಉತ್ತಮ (ಅಡಕದಲ್ಲಿರುವಂತೆ).
* ವಿಶೇಷ ಪ್ರಕರಣಗಳು ಏನಾದರೂ ನಡೆದಿದ್ದರೂ ಹಂಚಿಕೊಳ್ಳಲಿ.
* ಚರ್ಚೆಯಾದ ಮೇಲೆ ದೊಡ್ಡಗುಂಪಿನಲ್ಲಿ ಹಂಚಿಕೊಳ್ಳಲಿ. ಮುಖ್ಯ ಅಂಶಗಳನ್ನು ನೀವು ಕ್ರೋಢೀಕರಿಸಿ. ಬದಲಾವಣೆಯ ಯಾವ ಮಟ್ಟದಲ್ಲಿದ್ದೇವೆ ಎಂಬುದನ್ನು ತಿಳಿಸಿ.

ಗಮನಿಸಬೇಕಾದ ಅಂಶ :

* ತೀರಾ ಆಳಕ್ಕೆ ಹೋಗಬೇಕಾದ ಅಗತ್ಯವಿಲ್ಲ. ಎಲ್ಲರೂ ಪ್ರತಿಯೊಂದು ಅಂಶವನ್ನು ಎತ್ತಿಕೊಳ್ಳದಿದ್ದರೂ ಪರವಾಗಿಲ್ಲ.
* ಆದರೆ ಬರೇ ಪರಿಸ್ಥಿತಿಯ ಬದಲಾವಣೆಯೇ ಆಗ್ತಿದೆಯೊ ? ಸ್ಥಾನಮಾನದ ಕಡೆಗೆ ಗಮನವಿದೆಯೊ ಎಂಬುದನ್ನು ನೆನಪಿರುವಂತೆ ನೋಡಿಕೊಳ್ಳಿ.

ನಿರೀಕ್ಷಿತ ಫಲಿತಾಂಶ :

* ತಮ್ಮ ತಮ್ಮ ಸಂಘಗಳ ಆಗು, ಹೋಗುಗಳನ್ನು ವಿಮರ್ಶೆ ಮಾಡಿಕೊಳ್ಳುವ ಕ್ರಿಯೆ ಕಲಿಯಬೇಕು.
* ತಮ್ಮ ಬೆಳವಣಿಗೆಯ ಬಗ್ಗೆ ಸಂಭ್ರಮ ಪಡೆದು ಶಕ್ತಿ, ಭರವಸೆ ಅನುಭವಿಸುವಂತೆ ಆಗಬೇಕು.

ವೈಯಕ್ತಿಕ ಟಿಪ್ಪಣಿ :

# ಸಂಘದ ಹೆಜ್ಜೆಗಳು

(ಸೂಚಕಗಳು)

ಈ ಕೆಳಗಿನ ವಿಚಾರಗಳಿಗೆ ಸಂಬಂಧಿಸಿ ನಿಮ್ಮ ಸಂಘ ಏನು ಕೆಲಸ ಮಾಡಿದೆ ?
ಏನೇನು ಪ್ರಕರಣಗಳು ನಡೆದಿವೆ ?

* ಹೆಣ್ಣು ಮಕ್ಕಳ ಶಿಕ್ಷಣ
* ಎಳೆ ವಯಸ್ಸಿನ ಮದುವೆ
* ದೇವದಾಸಿ ಪದ್ಧತಿ
* ಸಾರಾಯಿ ಸಮಸ್ಯೆ
* ಕುಡಿತದ ಸಮಸ್ಯೆ
* ಭೂಮಿಯ ಒಡೆತನ
* ಕೌಟುಂಬಿಕ ಹಿಂಸೆ
* ಆಸ್ತಿ, ಮನೆ ಒಡೆತನ
* ಕೂಲಿ, ಸಮಾನ ವೇತನ
* ನೀರು, ಉರುವಲು
* ಸಾರ್ವಜನಿಕ ಸಂಪನ್ಮೂಲ ಅಂಗನವಾಡಿ, ರೇಶನ್ ಇತ್ಯಾದಿ
* ಕುಟುಂಬ ಯೋಜನೆ ವಿಚಾರ
* ಮಹಿಳೆಯರ ಮೇಲೆ ಅತ್ಯಾಚಾರ
* ಪಂಚಾಯತ್ ರಾಜ್‌ನಲ್ಲಿ ಭಾಗವಹಿಸುವಿಕೆ
* ಮಹಿಳೆಯರ ಆರೋಗ್ಯ
* ಜಾತಿ ಸ್ಥಾನಮಾನ
* ವರದಕ್ಷಿಣೆ
* ಮಹಿಳೆಯರ ಚಲನಶೀಲತೆ

ಮೇಲೆ ಹೇಳಿದ್ದು ಕೆಲವು ಕ್ಷೇತ್ರಗಳು ನೆನಪಿಸಿಕೊಳ್ಳುವುದಕ್ಕಾಗಿ ಮಾತ್ರ. ಈ ವಿಚಾರಕ್ಕೆ ಸಂಬಂಧಿಸಿ ಏನು ಮಾಡಿದ್ದಾರೆ, ಅದು ಸಶಕ್ತತೆಯ ದಾರಿಯಲ್ಲಿ ಇದೆಯೇ, ಇಲ್ಲವೇ ಎಂಬುದನ್ನು ನೋಡುವುದು ಮುಖ್ಯ ಉದಾ.: ಕುಟುಂಬ ಯೋಜನೆಯನ್ನು ಮಾಡಿರಬಹುದು. ಆದರ ಬಗ್ಗ ಹೇಗೆ ನಿರ್ಧಾರ ತೆಗೆದುಕೊಂಡರು, ಪರಿಣಾಮ ಏನಿದೆ ಎಂಬುದು ಮುಖ್ಯವಾಗುತ್ತದೆ. ಯಾವುದಾದರೂ ಕಾರ್ಯಕ್ರಮದ ಬಲಿಪಶುವಾಗಿಲ್ಲವಷ್ಟೆ ಎಂಬುದನ್ನು ಗಮನಿಸಬೇಕಾಗುತ್ತದೆ.



# ಮುಂದಿನ ಹೆಜ್ಜೆಗಳು

24 ವಿಷಯ : ಮುಂದಿನ ಯೋಜನೆಗಳು

**ಕನಿಷ್ಠ ಸಮಯ :**

1 ಗಂ.

**ತಯಾರಿ :**

ತರಬೇತಿಯ ಅವಧಿಯಲ್ಲೇ ಮಹಿಳೆಯರು, ತಾವೇನಾದರೂ ಮುಂದೆ ಮಾಡಬಹುದಾದುದನ್ನು ಸೂಚಿಸಿದ್ದರೆ ಅದನ್ನು ಸಂಗ್ರಹಿಸಿ ಇಟ್ಟುಕೊಳ್ಳಿ.

**ಉದ್ದೇಶ :**

* ತರಬೇತಿ ಅನುಭವದೊಂದಿಗೆ, ಇದರಲ್ಲಿ ತಿಳಿದ ಅಂಶಗಳ ಆಧಾರದ ಮೇಲೆ ಮುಂದಿನ ಹೆಜ್ಜೆಗಳನ್ನು ರೂಪಿಸುವುದು.

**ಚಟುವಟಿಕೆ :**

* ಇಬ್ಬಿಬ್ಬರು ಜತೆ ಸೇರಿ 15 ನಿ. ಕಾಲ, ತಾವು ಒಂಟಿಯಾಗಿ ಏನು ಮಾಡಬಹುದು, ಸಂಘದಲ್ಲಿ ಏನು ಮಾಡಬಹುದು ಎಂಬುದನ್ನು ಚರ್ಚಿಸಿಕೊಳ್ಳಲಿ.
* ದೊಡ್ಡ ಗುಂಪಿನಲ್ಲಿ ಅವರ ಮುಂದಿನ ಹೆಜ್ಜೆಗಳನ್ನು ಹಂಚಿಕೊಳ್ಳಲಿ. ಚಿಕ್ಕದು, ದೊಡ್ಡದು ಎಂಬ ಯೋಚನೆಯೇ ಬಾರದಂತೆ ಹಂಚಿಕೊಳ್ಳಲು ಸಹಕರಿಸಿ. ದೊಡ್ಡ ದೊಡ್ಡ ಕಾರ್ಯಗಳನ್ನು ನಿರೀಕ್ಷಿಸಬೇಡಿ. ನಿರ್ಧಿಷ್ಟವಾಗಿ, ಚಿಕ್ಕ ಚಿಕ್ಕ ಯೋಜನೆಗಳು ಬರಲಿ. ಉದಾ.: ನನ್ನ ಮಗಳಿಗೆ ಶಿಕ್ಷಣ ಕೊಡುತ್ತೇನೆ, ಊರಿನ ಹೆಣ್ಣು ಮಕ್ಕಳು ಶಾಲೆಗೆ ಹೋಗುವಂತೆ ನೋಡಿಕೊಳ್ಳುತ್ತೇವೆ, ಗಾದೆಗಳನ್ನು ಪ್ರಶ್ನಿಸುತ್ತೇವೆ, ಗ್ರಾಮಸಭೆಯಲ್ಲಿ ಭಾಗವಹಿಸುತ್ತೇವೆ.
* ತರಬೇತಿಯ ಅವಧಿಯಲ್ಲಿ ಯಾವುದಾದರೂ ಕಾರ್ಯಯೋಜನೆ ಅವರಾಗಿ ಹೇಳಿದ್ದರೆ ಅವನ್ನೂ ಇಲ್ಲಿ ನೆನಪಿಸಿಕೊಡಿ.

**ಗಮನಿಸಬೇಕಾದ ಅಂಶ :**

* ಈ ಯೋಜನೆಗಳನ್ನು ತಪ್ಪದೆ ದಾಖಲಿಸಿಕೊಳ್ಳಿ. ವರದಿಯಲ್ಲಿ ಎದ್ದು ಕಾಣುವಂತೆ ಹಾಕಿರಿ.
* ಇವು ಮಹಿಳೆಯರೇ ಹೇಳಿರುವಂತಹ ಯೋಜನೆಗಳು. ಕಾರ್ಯಗತವಾಗುವಂತೆ ಅನುಸರಣೆ ಮಾಡಲು ಸಹಕರಿಸಬಹುದು.

**ನಿರೀಕ್ಷಿತ ಫಲಿತಾಂಶ :**

* ಹತ್ತು ಹಲವು ನಿರ್ಧಿಷ್ಟವಾದ ತೀರಾ ಚಿಕ್ಕದೆನಿಸಿದರೂ ಪರವಾಗಿಲ್ಲ, ಯೋಜನೆಗಳು ಹುಟ್ಟಿಕೊಳ್ಳಬೇಕು.

**ವೈಯಕ್ತಿಕ ಟಿಪ್ಪಣಿ :**

# ಹೇಗಾಯಿತು ?

25 ವಿಷಯ : ತರಬೇತಿಯ ಮೌಲ್ಯಮಾಪನ

**ಉದ್ದೇಶ :**

* ಒಟ್ಟು ತರಬೇತಿಯ ಕಲಿಕೆಗಳನ್ನು ಮೆಲುಕು ಹಾಕುವುದು.
* ತರಬೇತಿಯು ಹೇಗೆ ನಡೆಯಿತು ಎಂಬುದನ್ನು ಮೌಲ್ಯಮಾಪನ ಮಾಡುವುದು.

**ಕನಿಷ್ಠ ಸಮಯ :**

1 ಗಂ.

**ಚಟುವಟಿಕೆ :**

* ಇಬ್ಬಿಬ್ಬರು ಒಟ್ಟಿಗೆ ಕುಳಿತು ತರಬೇತಿ ಹೇಗೆ ನಡೆಯಿತು ? ಏನು ಕಲಿತುಕೊಂಡಿದ್ದು ಎಂಬುದನ್ನು ಹಂಚಿಕೊಳ್ಳಲಿ. ಒಬ್ಬರು ಇನ್ನೊಬ್ಬರಿಗೆ ಹೇಳಲಿ. ಕಲಿತ ವಿಚಾರ, ನೆನಪಿರುವ ಅಂಶ, ಊಟ, ವಸತಿ, ವಾತಾವರಣ, ತುಂಬಾ ಖುಶಿ ಕೊಟ್ಟಂತಹ ಅಂಶ, ಬೇಸರ ತಂದ ವಿಚಾರ ಪರಸ್ಪರ ಮಾತಾಡಿಕೊಳ್ಳಲಿ. (15 ನಿ)
* ದೊಡ್ಡ ಗುಂಪಿನಲ್ಲಿ ಒಬ್ಬರು ಇನ್ನೊಬ್ಬರು ಹೇಳಿದ ವಿಚಾರಗಳನ್ನು ಹಂಚಿಕೊಳ್ಳಲಿ. ಅಂದರೆ ತಮ್ಮ ಅನಿಸಿಕೆಯಲ್ಲ, ಜತೆಗಿದ್ದವರ ಅನಿಸಿಕೆ ಹೇಳುವುದು. ಹೇಳುವವರು ಏನಾದರೂ ಬಿಟ್ಟಿದ್ದರೆ ಅನಿಸಿದರೆ ಜತೆಗಿದ್ದವರು ಸೇರಿಸಬಹುದು.

**ಗಮನಿಸಬೇಕಾದ ಅಂಶ :**

* ಪರಸ್ಪರ ಹಂಚಿಕೊಳ್ಳಲು ಸಹಕರಿಸಿ.
* ದೊಡ್ಡ ದೊಡ್ಡ ವಿಷಯಗಳು ಬಾರದೇ ಹೋದರೆ ತಲೆಕೆಡಿಸಿಕೊಳ್ಳಬೇಡಿ.

**ನಿರೀಕ್ಷಿತ ಫಲಿತಾಂಶ :**

* ತಾವು ಕಲಿತ, ಅರ್ಥ ಮಾಡಿಕೊಂಡ ಕೆಲವು ಅಂಶಗಳನ್ನು ಅಭಿವ್ಯಕ್ತಿಸಲು ಸಾಧ್ಯವಾಗಬೇಕು.

**ವೈಯಕ್ತಿಕ ಟಿಪ್ಪಣಿ :**

# ಹೋಗಿ ಬನ್ನಿ...

26 ವಿಷಯ : ಪರಸ್ಪರ ವಿದಾಯ ಸೂಚನೆ

ಕನಿಷ್ಠ ಸಮಯ :

15 ನಿ.

**ಉದ್ದೇಶ :**

* ಪರಸ್ಪರ ಶುಭ ಹಾರೈಸುವುದು. ಆತ್ಮೀಯತೆ ಸೂಚಿಸುವುದು.

**ಚಟುವಟಿಕೆ :**

* ಪ್ರತಿಯೊಬ್ಬರೂ ಪ್ರತಿಯೊಬ್ಬರನ್ನೂ ಹತ್ತಿರ ಹೋಗಿ ಸಂಪರ್ಕಿಸಲಿ. ಜತೆ ಸೇರಿ ಮುಂದಿನ ಹೆಜ್ಜೆ ಹಾಕುವ ಬಗ್ಗೆ ಹಾರೈಸಿಕೊಳ್ಳಲಿ.
* ತರಬೇತಿ ಸ್ಥಳದಲ್ಲಿ ಓಡಾಡುತ್ತಾ ಈ ಕ್ರಿಯೆ ನಡೆಯಲಿ. ಸಂಭ್ರಮದ ವಾತಾವರಣ ತುಂಬಲಿ.
* ಇದಾದ ಬಳಿಕ ಎಲ್ಲರೂ ಕೈ ಹಿಡಿದುಕೊಂಡು ವೃತ್ತ ಮಾಡಿ ಎರಡು ನಿಮಿಷ ಮೌನವಾಗಿರಲಿ.

  (ಹಾಡು ಬೇಕಾದರೆ ಹಾಡಬಹುದು)

  ಆರದ ದೀಪದ ವಿಚಾರ ಮತ್ತೆ ಇಲ್ಲಿ
  ನೆನಪಿಸಬಹುದು.

  "ಎಲ್ಲರೂ ದೀಪಗಳನ್ನು
  ಹಿಡಿದುಕೊಂಡು ನಿರಂತರವಾಗಿ ಬೆಳಗುವಂತೆ
  ಹೆಜ್ಜೆ ಹಾಕೋಣ".
  ಶುಭಹಾರೈಕೆಯೊಂದಿಗೆ ನಿಲ್ಲಿಸಿ.

**ವೈಯಕ್ತಿಕ ಟಿಪ್ಪಣಿ :**

ಅಡಕಗಳು : ಈ ಕೆಳಗಿನ 5 ಪ್ರಕರಣಗಳು (Case Studies) ಸಮಖ್ಯಾ ಅನುಭವದಿಂದಲೇ ಬಂದಿವೆ. ಇತಹ ಸುಮಾರು ಅನುಭವಗಳನ್ನು ದಾಖಲಿಸಿಡಬಹುದು ಕಲಿಕೆಗಾಗಿ, ಪ್ರೇರಣೆಗಾಗಿ, ಬಳಸಬಹುದು.

## ಕಿರಾಣಿ ವ್ಯಾಪಾರದ ದೇವಮ್ಮ

"ನನ್ನ ಹೆಸರು ದೇವಮ್ಮ ಸಿನಗನೋಡಿ ತಾಂಡದಲ್ಲಿ ಬಡ ಕುಟುಂಬದಲ್ಲಿ ಎರಡನೆ ಹೆಂಡತಿಯಾಗಿ ಮನೆಯ ಆಗು ಹೋಗುಗಳನ್ನು ನೋಡುತ್ತಾ ಜೀವನ ಅಂದ್ರೆ ಇಷ್ಟೆ ಅಂದುಕೊಂಡಿದ್ದೆ. ಬರಬರುತ್ತಾ ನನ್ನ ಗಂಡನ ವ್ಯಾಪಾರದಲ್ಲಿ ಸಹಾಯಕಳಾಗಿ ಹೊರಗಿನ ವ್ಯವಹಾರದ ಬಗ್ಗೆ ಅಲ್ಪ ಸ್ವಲ್ಪ ತಿಳಿದುಕೊಂಡೆ. ಮಹಿಳಾ ಸಮಖ್ಯಾ ಸಂಸ್ಥೆಯವರು ನಮ್ಮ ತಾಂಡಕ್ಕೆ ಬಂದು ಸಂಘವನ್ನು ಮಾಡಿದರು. ಹೊರಗಿನ ವಿಚಾರ ತಿಳಿಯುವುದರ ಜತೆಗೆ ಆತ್ಮವಿಶ್ವಾಸ ಬೆಳೆಸಿಕೊಂಡೆ. ಸಂಘದ ಇತರ ಎಲ್ಲಾ ಕಾರ್ಯಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದೆ. ಅಧಿಕಾರಿಗಳ ಭೇಟಿ ಮಾಡಿದೆ. ನನಗೂ ಸ್ವಾವಲಂಬಿಯಾಗಬೇಕು ಅಂತ ಆಸೆಯಾಗಿ ನಮ್ಮ ಮನೆಯವರು ಮಾಡುವ ಕಿರಾಣಿ ವ್ಯಾಪಾರ ಮತ್ತು ಚಹಾದ ಅಂಗಡಿಗೆ ಅವರಿಗೆ ಸಹಾಯಕಳಾಗಿ ನಿಂತೆ. ಈಗ ಅವರಿಗಿಂತ ಹೆಚ್ಚಿನ ವ್ಯವಹಾರ ಜ್ಞಾನ ನನಗಿದೆ. ಸುಳ್ಳು ಹೇಳ್ತಾಳೆ ಅಂತೀರಾ.. ಇಲ್ಲ ನಿಮ್ಮ ಎಲ್ಲರ ಮುಂದೆ ಒಂದು ವಿಷಯ ಹೇಳಬೇಕು ಅನ್ನಿಸುತ್ತೆ.

ನಾನು ಹತ್ತು ದಿನ ಮೈಸೂರಿಗೆ ಪ್ರವಾಸ ಹೋಗಿದ್ದೆ. ನನ್ನ ಗಂಡ ಎರಡು ದಿನಕ್ಕೊಮ್ಮೆ ಕಛೇರಿಗೆ ಬಂದು ಎಂದು ಬರ್ತಾರೆ ಅಂತ ಕೇಳುತ್ತಿದ್ದ. ನಾನು ಬಂದು ಸುಮ್ಮನೆ ಬಿಡ್ತೀನಾ. ನಾನು ಎಲ್ಲಾದ್ರೂ ಓಡಿಹೋದ್ನೇ, ಒಂದು ದಿನ ಹೆಚ್ಚು ಕಡಿಮೆ ಬರುತ್ತಿದ್ದೆ. ಅಲ್ಲಿಗ್ಯಾಕೆ ಹೋಗಿದ್ದು ಗೊತ್ತಾಗೋದಿಲ್ವೇ ನಿಮಗೆ ಎಂದು ಗದರಿ ಬಿಟ್ಟೆ.

ಈಗ ಮನೆಯಲ್ಲಿ ನನ್ನ ಗಂಡನಷ್ಟೆ ನಾನು ಎಲ್ಲಾದರಲ್ಲೂ ಭಾಗಿಯಾಗಿ ಕೆಲಸ ಮಾಡುವೆನು. ನನ್ನ ಗಂಡನಿಗೆ ಮೊದಲೊಬ್ಬ ಹೆಂಡತಿ ಇದ್ದಾಳೆ. ನನಗೆ ಇಬ್ರು ಗಂಡು ಮಕ್ಕಳು. ನಾನು ಬಡ್ವರ ಜಾತಿ ಮಹಿಳೆ ಆದರೂ ಈ ತಾಂಡದಲ್ಲಿ ಎಲ್ಲರೂ ನನ್ನನ್ನು ಗೌರವಿಸುವರು.

ಈ ಮಹಿಳಾ ಸಮಖ್ಯಾ ದುಡ್ಡು ಬೆಳ್ಳಿ, ಬಂಗಾರ ಕೊಡಕ್ಕಿಂತ ಮಾಹಿತಿ ಎಂಬ ಶಿಕ್ಷಣ ಕೊಟ್ಟು ದೊಡ್ಡ ಉಪಕಾರ ಮಾಡಿತು."

## ರೋಡ್ ಮಾಡಿಸಿಕೊಂಡದ್ದು

ತೇಗಂಪುರ ಊರೊಳಗೆ ರೋಡ್ ಹಾಕಿಸುತ್ತಿದ್ದರು. ಅವರು ಹಾಕ್ತಾ ಹಾಕ್ತಾ ಒಂದು ಮನಿಯಗಾಣ ರೋಡ್ ನಿಲ್ಲಿಸಿದ್ರು. ಆಗ ತೊಟ್ಟಲು ಮನೆ ಟೀಚರ್ ಇಬ್ಬರು ಹೋಗಿ, "ಯಾಕ್ರೀ ಮೆಂಬರ್ ಸಾಬ್ರೇ, ನಮ್ಮ ಸಂಘ ಮನಿ ನಿಮ್ಮ ಕಣ್ಣಿಗೆ ಕಾಣಸಾಕಿಲ್ವಾ, ನಮ್ಮ ಮಕ್ಕಳು ಕೆಸರಾಗೆ ಹೋಗಬೇಕಾ" ಎಂದು ವಿಚಾರಿಸಿದರು.

"ನಮಗೆ ಇಷ್ಟೇ ಬಜೆಟ್ ಇತ್ತು, ಇಲ್ಲಿಗೆ ಹಾಕಿದೆವು. ಮುಂದಕ ಹೋಗಲಾಕ ದುಡ್ಡಿಲ್ಲ" ಅಂದ್ರು. ಆಗ "ಅದೆಲ್ಲ ನಾವು ಕೇಳಲಾಕಿಲ್ಲ, ಹ್ಯಾಂಗಾರ ಮಾಡಿ ನಮ್ಮ ಸಂಘ ಮನಿತನ ರೋಡ್ ಹಾಕರಿ" ಎಂದು ಗಲಾಟೆ ಮಾಡಿ ರೋಡ್ ಹಾಕಿಸಿಕೊಂಡರು (ಕಲ್ಲು ಹಾಕಿದ ಕಚ್ಚಾ ರೋಡ್)

# ಹಾಲಿನ ಸೊಸೈಟಿ ಅಧ್ಯಕ್ಷರು

ಹಾಡಗಿಲ ಗ್ರಾಮದಲ್ಲಿ, ಹಾಲಿನ ಕೇಂದ್ರದವರು ಹಾಲಿನ ಸೊಸೈಟಿಯನ್ನು ಸ್ಥಾಪಿಸಲು ಮುಂದಾದರು. ಮಹಿಳೆಯರು ಇಲ್ಲಿ ಹೆಚ್ಚಾಗಿ ಹೈನುಗಾರಿಕೆಯಲ್ಲಿ ತೊಡಗಿದ್ದರು. ಸಂಘದ ಮಹಿಳೆಯರು ಸೊಸೈಟಿ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸಿದರು.

ಊರ ಪ್ರಮುಖರನ್ನು ಹಾಗೂ ಮಹಿಳೆಯರನ್ನು ಮತ್ತು ಸಂಘ ಮಹಿಳೆಯರನ್ನು ಸೇರಿಸಿ ಒಂದು ಸಭೆ ನಡೆಸಲಾಯಿತು. ಆ ಸಭೆಯ ತೀರ್ಮಾನದ ಪ್ರಕಾರ ಮಹಿಳಾ ಪದಾಧಿಕಾರಿಗಳನ್ನು ಆರಿಸಬೇಕಾಗಿತ್ತು. ಊರಲ್ಲಿ ಯಾವ ಮಹಿಳೆಯೂ ಅಧ್ಯಕ್ಷರ ಜವಾಬ್ದಾರಿಯನ್ನು ವಹಿಸಿ ಹಾಲಿನ ಕೇಂದ್ರ ನಡೆಸಲು ಮುಂದಾಗಲಿಲ್ಲ. ಆ ಸಂದರ್ಭದಲ್ಲಿ ಸಂಘ ಮಹಿಳೆಯರು ಸಂಘದಲ್ಲಿ ಸಕ್ರಿಯವಾಗಿ ಕೆಲಸ ಮಾಡುತ್ತಿದ್ದ ಮಾರವ್ವನನ್ನು ಸೂಚಿಸಿದಾಗ ಎಲ್ಲರೂ ಒಪ್ಪಿಕೊಳ್ಳಬೇಕಾಯಿತು.

ಸಭೆ ಮುಗಿದ ನಂತರ ಊರವರಿಗೆ, ತಮ್ಮ ಜನರಲ್ಲೇ ಯಾರಾದರೂ ಅಧ್ಯಕ್ಷರಾಗಿದ್ದರೆ ಒಳ್ಳೆಯದಾಗಿತ್ತು ಅಂತ ಅನಿಸಿ, ಪದಾಧಿಕಾರಿಗಳಲ್ಲಿ ಬದಲಾವಣೆ ಮಾಡಲು ಸೂಚಿಸಿದರು. ಸಂಘದವರು, "ಮದ್ವಿ ಆಗಾದು ಸಿಂಗರಾಗಿ ಹಂದರದಾಗ ಕುಂಡರದು ಒಂದೇ ಸಲ ಇರತದ, ಈಗ ಆರಿಸೀರಿ.. ಮತ್ತ ಮುಂದಿನ ವರ್ಷ ಆರಿಸಾಗ ನಿಮ್ಮ ಮಂದಿಗೆ ಮಾಡ್ರಿ" ಎಂದು ಕಡ್ಡಿ ತುಂಡಾಗುವಂತೆ ಹೇಳಿದರು.

ಆರಿಸಿ ಬಂದ ಮಹಿಳೆ ಮಾರವ್ವಗೆ ಕೆ.ಎಮ್.ಎಫ್. ವತಿಯಿಂದ ಗುಜರಾತ್‌ಗೆ ಅಮೂಲ್ ಡೈರಿ ನೋಡಿ ಬರಲು ಅವಕಾಶ ಸಿಕ್ಕಿತು. ಬಸ್ ಹತ್ತಿ ನಿಂತಾಗ ಬಸ್‌ನಲ್ಲಿ ಮಹಿಳೆಯರು ಒಬ್ಬೊಬ್ಬರ ಜಾತಿ ಹೇಳಿಕೊಂಡರು. ಮಾರವ್ವ ಮೊದಲಿಗೆ ಹೇಳಲಿಲ್ಲ, ಬಹಳ ಪೀಡಿಸಲು, 'ಹರಿಜನರಾಕಿ' ಇದ್ದೀನಿ, ಏನ್ ಮಾಡತೀರಿ' ಎಂದಳು. ಉಳಿದವರು "ಇಷ್ಟು ಚೆಲುವೆಯಾದ ನೀನು ಹರಿಜನರವಳಾಗಿರಲು ಸಾಧ್ಯವಿಲ್ಲ" ಎಂದಾಗ ಮಾರವ್ವ ತಾನು ಹರಿಜನದವಳು ಎಂದೇ ಹೇಳಿದಳು.

ಊಟ, ತಿಂಡಿ ಸಮಯ ಬಂದಾಗ ಮಹಿಳೆಯರು ಅವಳನ್ನು ದೂರವಿಡಲು ಪ್ರಯತ್ನಿಸಿದರು. "ಸ್ವಲ್ಪ ಅತತ್ ಸರಿ, ಅತತ್ ಸರಿ.." ಎನ್ನುತ್ತಿದ್ದರು. ಆಗ ಮಾರವ್ವ "ನಾ ಯಾಕೆ ಸರೀಬೇಕು. ನಾ ಹರಿಜನವಳಾಗಿದ್ರೂ ನಿಮಗಿಂತ ಚೆಲುವೆಯಾಗಿದ್ದೇನೆ ಅಂತ ನೀವೇ ಒಪ್ಪೋತೀರ. ನಾನು ನಿಮಗಿಂತ ಸ್ವಚ್ಛವಾಗಿದ್ದೇನೆ" ಎಂದು ವಾದಿಸಿದಳು. ಇವಳ ವಾದಕ್ಕೆ ಅವರು ಸುಮ್ಮನಾದರು. ತಿರುಗಿ ಕಲಬುರ್ಗಿ ತಲುಪುವವರೆಗೂ ಅವಳ ಕುಲವನ್ನು ಎತ್ತಿ ಆಡಿಕೊಳ್ಳಲಿಲ್ಲ.

ಹೀಗೆ ತಿರಸ್ಕರಿಸುವ ಮೇಲು ಜಾತಿಯವರನ್ನು ಅವಳು ತನ್ನನ್ನು ದೂರವಿರಿಸದಂತೆ ಎಚ್ಚರ ವಹಿಸುತ್ತ ತನ್ನ ಅಧ್ಯಕ್ಷ ಸ್ಥಾನವನ್ನು ಕಾಪಾಡಿಕೊಂಡು ಬರುತ್ತಿದ್ದಾಳೆ.

# ಸಮಕೆಲಸಕೆ ಸಮಕೂಲಿ ಇಲ್ಲ

ಬೀದರಿನಲ್ಲಿ 'ಹೆಜ್ಜೆಗಳ' ಪ್ರಾಯೋಗಿಕ ತರಬೇತಿ ನಡೆದಿತ್ತು. ಸಮಾನ ವೇತನದ ಬಗ್ಗೆ ಮಾತಾಡುವಾಗ ಸಂಘ ಮಹಿಳೆಯೊಬ್ಬರು ತಮ್ಮ ಅನುಭವವೊಂದನ್ನು ಹಂಚಿಕೊಂಡರು. ಹೊಸತಾಗಿ ಕಟ್ಟಿದ ಮನೆಗೆ ನೀರುಣಿಸುವ ಕೆಲಸಕ್ಕೆ ಅವರ ಮಗ ಹೋಗುತ್ತಿದ್ದ. ಅವನಿಗೆ ಆರೋಗ್ಯ ಸರಿ ಇಲ್ಲದಾಗಿ, ಈ ಹೆಂಗಸೇ ಮಗನ ಬದಲಿಗೆ ಕೆಲಸ ಮಾಡಲು ಹೋದರು. ಮಗನಿಗೆ ಕೊಡುತ್ತಿದ್ದ ಕೂಲಿ ರೂ. 60 ಆದರೆ ಈಕಿಗೆ ರೂ. 40 ಅಷ್ಟೇ ಕೊಟ್ಟರು. ಕಾರಣ ಕೇಳಿದ್ದಕ್ಕೆ ಹೆಂಗಸರಿಗೆ ಇರುವ ಕೂಲಿ ಕೊಟ್ಟಿದ್ದೇವೆ ಎಂಬ ಉತ್ತರ ಬಂತು. ತನ್ನ ಮಗ ತನಗಿಂತ ಕಡಿಮೆ ಕೆಲಸ ಮಾಡುವ ಸಾಧ್ಯತೆ ಇದ್ದರೂ, ಅವನನ್ನು ಗಂಡಸು ಅಂತ ನೋಡ್ತಾರೆ ಎಂದರು. ಇಂತಹುಗಳ ಬಗ್ಗೆ ಚರ್ಚಿಸಬೇಕು. ಎಂದು ಗುಂಪಿನಲ್ಲೂ ಮಾತುಕತೆ ಆಯಿತು. ಇದು ಸರಿಯಲ್ಲ ಎಂದೂ ಎನಿಸಿತು.

# ಮುತ್ತು ಕಟ್ಟುವ ಕೊರಳಲ್ಲಿ ಮಾಂಗಲ್ಯ ಬಿದ್ದಾಗ

ನನ್ನ ಹೆಸರು ಸಂಗವ್ವ. ನಾನು ಬಸವಿ ಹೆಣ್ಣು ಮಗ್ಳು. ನನ್ನ ಅವ್ವ, ಅಪ್ಪ ತೊಟ್ಟಿಲಲ್ಲಿ ಮುತ್ತು ಕಟ್ಟಿಸಿದ್ರು. ನನಗೆ ಯಾವ ಅರಿವು ಆಗ ಇರಲಿಲ್ಲ, ನನಗೆ ಈಗ ಒಬ್ಬ ಗಂಡು ಮಗ ಇಬ್ಬರು ಹೆಣ್ಣು ಮಕ್ಕಳು ಇದ್ದಾರೆ. ನನ್ನ ಮಗ ನನ್ನ ನೋಡಿಕೋತಾನೋ ಇಲ್ಲ ನಮ್ಮ ಹಿಂದಿನ ಸಂಪ್ರದಾಯದಂತೆ ನನ್ನ ಸಣ್ಣ ಮಗಳಿಗೆ ಮುತ್ತು ಕಟ್ಟಸೋಣಾಂತ ಇದ್ದೆ. ನನ್ನ ಮಗನ ಮದ್ವಿ ಮಾಡಿನಿ. ಮುತ್ತು ಕಟ್ಟಬೇಕು, ಇನ್ನು ಸ್ವಲ್ಪ ತಿಳುವಳಿಕೆ ಬರ್ಲಿ ಅಂತ ಬಿಟ್ಟಿದ್ದೆ. ಅಷ್ಟರಾಗ ನಮ್ಮ ಊರಿಗೆ ಮಹಿಳಾ ಸಮಖ್ಯಾದವರು ಹೆಣ್ಣು ಮಕ್ಕಳಿಗೆ ಸಂಘ ಮಾಡಬೇಕು. ತಿಳುವಳಿ ಕೊಡಬೇಕು ಅಂತ ನಮ್ಮ ಊರಿಗೆ ಬಂದ್ರು. ಎಲ್ಲರ ಮನಸ್ಸು ಗೆದ್ದು ಒಂದು 10 - 15 ಜನ ಸಂಘ ಮಾಡಿದ್ರು. ಆದರಲ್ಲಿ ನಾನು ಒಬ್ಬಾಕೆ. ನೋಡಾಣ ಸಾಲ ಸುಲ ಏನಾರಾ ಕೊಡಸತಾರಾ ಅಂತ ಅನ್ಕೊಂಡಿದ್ದೆ. ಆದರೆ ಅವರು ಅಷ್ಟು ಜನನ್ನ ರಾತ್ರಿ ಸೇರಿಸಿ ನಮ್ಮ ಕೇರಿಯಲ್ಲಿರುವ ಸಮಸ್ಯೆಗಳ ಬಗ್ಗೆ ಮಾತಾಡುತ್ತಿದ್ರು. ದೇವದಾಸಿ ಬಿಡೋದು ಒಳ್ಳೆಯದಲ್ಲ, ಅದರಿಂದ ಬಾಳ ದೊಡ್ಡ ರೋಗ ಬರುತ್ತೆ. ಅದು ವಾಸಿ ಆಗೋದೆ ಇಲ್ಲ, ಅಂತ ಹೇಳತಿದ್ರು, ನನ್ನ ಮಗಳನ್ನು ದೇವದಾಸಿ ಬಿಡತೀನಿ ಅಂತ ಸುದ್ದಿ ಅವರಿಗೂ ತಿಳೀತು. ನನಗೂ ಹೇಳಿದ್ರು, ಇದನ್ನ ನೋಡಿಕೊಂಡು ಸಂಘದಾಗ ಬಾಳಹೆಣ್ಣು ಮಕ್ಕಳು ಹೇಳಿದ್ರು, "ಬೇಡ ಮದ್ವಿ ಮಾಡಿಕೊಡು" ಅಂತ. ನನಗೆ ಸಿಟ್ಟು ಬಂದು ಒಂದೊಂದು ಸರ್ತಿ ಅದರ ಚರ್ಚೆ ಬಂದಾಗ ಮನಿಗೆ ಎದ್ದು ಹೋಗಿ ಬಿಡುತ್ತಿದ್ದೆ.

ಮನಿಗೆ ನಾನು ಬಂದಾಗ ಎಲ್ಲಿ ಯಾವಾಗ ಮಗಳನ್ನು ದೇವದಾಸಿ ಬಿಡತಾಳ ಅಂತ ಒಂದಿಟ್ಟು ಮಂದಿಯಿಂದ ಸಂಘದವರಿಗೆ ಗೊತ್ತಾತು. ಮತ್ತ ನಮ್ಮೂರ ಗೌಡ್ರಗೂನು ಹೇಳಿದ್ರು. ಅವರು ನನ್ನ ಮನಿಗೆ ಬಂದು ನೀನು ಮುತ್ತು ಕಟ್ಟಿಸಿದ್ರ ನಿನ್ನ ಊರಿನಿಂದ ಹೊರಗೆ ಹಾಕುತ್ತೇವೆ ನೋಡು ಅಂತ ಬೆದರಿಕೆ ಹಾಕಿದ್ರು. ಅಲ್ಲಿಂದ ನನಗೆ ನನ್ನ ಮನಿ ವಿಚಾರ ಇವರಿಗ್ಯಾಕ ಬೇಕು ನಾನು ದೇವದಾಸಿ ಬಿಟ್ಟೆ ಬಿಡತೀನಿ ಅಂತ ದುರಗಮ್ಮನ ಜಾತ್ರೆಗೆ ಕರಕೊಂಡು ಹೋದೆ. ಇವರು ಒಳಗಿಂದೊಳಗೆ ಪೋಲಿಸರಿಗೂ ತಿಳಿಸಿದ್ರು. ನನಗೆ ಗೊತ್ತಾಗಿರಲಿಲ್ಲ, ಜಾತ್ರೆಗೆ ಹೋಗಿ ಮುತ್ತು ಕಟ್ಟಸೋಣಾಂತ ಅಂದಾಗ ಪೋಲೀಸರು ಸಂಘದ 7 - 8 ಜನ ಹೆಣ್ಣು ಮಕ್ಕಳು ಬಂದು ಬಿಡಬ್ಯಾಡ ಕಂಪ್ಲೆಂಟ್ ಕೊಡುತೀವಿ, ಅದಕ್ಕೆ ಪೋಲೀಸರು ಬಂದಾರ ಅಂತ ಹೇಳಿದ್ರು. ಇನ್ನೇನು ನನ್ನ ಆಟ ನಡೆಯದಿಲ್ಲ ಅಂತ ಮತ್ತೆ ಬಂದೆ. ಬರುಬರುತ್ತಾ ಸ್ವಲ್ಪ ದಿನ ಎಲ್ಲರೂ ಮರಿತಾ ಆಮೇಲೆ ಮಾಡತೀನಿ ಅನ್ಕುಕೊಂಡೆ. ನಾನು ಒಬ್ಬಾಕಿ, ಇವರು ಊರಿನ ಮಂದಿ, ಸಂಘದ ಮಂದಿ ಒಗ್ಗಟ್ಟಾಗ್ಯಾರ ನನ್ನ ಬಿಡದಿಲ್ಲ ಅಂತ ಗೊತ್ತಾತು. ನನ್ನ ಮಗಳು ಏನು ಮಾಡಲಿಲ್ಲ, ನನ್ನ ಮಾತು ಉಗುಳು ಹಾಕಿ ದಾಟೋಳಲ್ಲ, ನಾನು ಏನು ಹೇಳುತ್ತೀನಿ ಅದ್ನ ಮಾಡಾಕಿ. ಇನ್ನೇನು ನನ್ನ ಮಗಳಿಗೆ ವಯಸ್ಸು ಆಗತೈತಿ ಮತ್ತೆ ಲಗ್ನ ವಯಸ್ಸು ದಾಟಿದರೆ ಯಾರ ಮಾಡಿಕೊಂಡು ಹೋಗುತಾರಾ ಇನ್ನೇನು ಸಂಘದವರು ಎಲ್ಲಿ ಹೋದರೂ ಬಿಡುವುದಿಲ್ಲ ಎಂದು ಗೊತ್ತಾಗಿ, ನಮ್ಮ ಕೇರ್ಯಾಗಿನ 7 - 8 ಜನನ್ನು ಕರಕೊಂಡು ಹೋಗಿ ರಿಜಿಸ್ಟಾರ್ ಮದ್ವಿ ಮಾಡಬೇಕು ಅಂತ ಕುಷ್ಟಗಿ ಕಛೇರಿಗೆ ಬಂದು ತಾಳಿ ಕಟ್ಟಸಿದೆ. ಇದರಾಗೂ ನನಗೆ ನಂಬಿಕೆ ಇಲ್ಲ, ಕಡೆತನ ನನ್ನ ಹತ್ರನ್ನ ನನ್ನ ಮಗಳು ಇರತಾಳೋ ಗಂಡನ ಮನಿಗೆ ನನ್ನ ಬಿಟ್ಟು ಹೋಗತ್ತಾಳೋ ಅಂತ ಒಂದು ಮನಿ ಕಟ್ಟಸ್ತೀನಿ. ನನ್ನ ಆಸ್ತೀಲಿ ಅರ್ಧ ಆಸ್ತಿ ಕೊಟ್ಟು ಅತ್ತೆ ಮಾವನತ್ರ ಹೋಗದಂಗ ಇಟ್ಟುಕೊಂತೀನಿ, ಕಡೆತನಕನು ನಮಗ ಕೂಲಿ ಕೆಲಸ ತಪ್ಪಿದಲ್ಲ, ಸಾಯೋವರೆಗೂ ಕೂಲಿ ಮಾಡಿಕೊಂಡೇ ಸಾಯಬೇಕು.

# ಸೌಂದರ್ಯ ಹೆಂಗಸರಿಗೆ ಒಂದು ಪವರ್

ಸರಸ್ವತಿ ದು.



ಸೌಂದರ್ಯ ಅನ್ನೋದು ನನ್ನ ಕಾಡೋಕೆ ಶುರುವಾದದ್ದು ಶಾಲೆಯ ಕೊನೆ ಮೂರು ವರ್ಷಗಳಲ್ಲಿ ಹಾಗು ಕಾಲೇಜಿನ ದಿನಗಳಲ್ಲಿ. ಮಾಮೂಲಿ ಶಾಲೆಯನ್ನು ಬಿಟ್ಟು ಪ್ರತಿಷ್ಠಿತ ಶಾಲೆ, ಕಾಲೇಜು ಸೇರಿದಾಗಲೆ ಹೆಚ್ಚಾಗಿದ್ದು ! ಶಾಲೆಯಲ್ಲಿ ಒಳಗೊಳಗೆ ಕಾಡುತ್ತಿದ್ದುದು, ಕಾಲೇಜಿನಲ್ಲಿ ತೀವ್ರವಾಗಿತ್ತು. ನಿಧಾನವಾಗಿ ಅನಿಸತೊಡಗಿತ್ತು... ನಾನು ಸುಂದರಿಯಲ್ಲ, ಸುಂದರಿಗಿರಬೇಕಾದ ಚೂಪು ಮೂಗು, ಪುಟ್ಟ ಬಾಯಿಯಾಗಲಿ, ಮುತ್ತಿನಂಥ ಹಲ್ಲುಗಳಾಗಲಿ, ಬೆಳ್ಳನೆ ಚರ್ಮವಾಗಲಿ ನನಗಿಲ್ಲ ಎನ್ನುವುದು. ಅರ್ಥವಾಗತೊಡಗಿತ್ತು ! ನಾನು ಸುಂದರಿಯಲ್ಲ ಅನ್ನುವುದು ಹುಟ್ಟಿದಾಗಲೆ ಇತ್ಯರ್ಥವಾಗಿದ್ದು ಬೆಳೆಯುತ್ತಾ ಬೆಳೆಯುತ್ತಾ ಜನರ ಮಾತುಗಳಿಂದ confirm, ಆಗುತ್ತಾ ಹೋಯಿತು. ಮಟ್ರು ಮೂಗಿ, ಉಬ್ಬಲ್ಲಿ, ಕರ್ರಿ ಇವೆಲ್ಲ ಶಬ್ದಗಳು ಪದೇ ಪದೇ ಕಿವಿಗೆ ಬಿದ್ದು ಮನದೊಳಗೂ ಇಳಿದು, ನಾನೂ ನಂಬಿದೆ, ನಾನು ಕುರೂಪಿ ಅಂತಾ.

ಶಾಲೆಯಲ್ಲಿ ಜತೆಯವರು ನನ್ನ ಬಣ್ಣ, ಹಲ್ಲು, ಮೂಗು ಕುರಿತು ರೇಗಿಸಿದಾಗ ಹೊಟ್ಟೇಲಿ ಮುಳ್ಳು ಚುಚ್ಚೋದು. ಹಿಂದೆ ಬಂದು Skirt ಎತ್ತೋರು, ಎಷ್ಟೋಂದು ನೋವಾಗೋದು ! ಸ್ಕೂಲ್ Group Photoನಲ್ಲಿ ನನ್ನ ಮುಖ ನೋಡಿ ಅದೆಷ್ಟು ನಕ್ಕಿದ್ರು. ಅದೇ ಕೊನೆ, ಮುಂದೆ ಎಷ್ಟೋ ವರ್ಷಗಳ ಕಾಲ Group Photoಗೆ ನಿಲ್ತಾನೇ ಇರ್ಲಿಲ್ಲ. ಯಾಕೆ ವಿರೋಧಿಸ್ತಾ ಇರ್ಲಿಲ್ವೋ ಗೊತ್ತಿಲ್ಲ, ಅಂತು ನನ್ನಂತಹವರು ಇರೋದೇ ರೇಗಿಸಿಕೊಳ್ಳೊಕೆ ಅಂತ ನಂಬಿಬಿಟ್ಟಿದ್ದೆ.

ಎಷ್ಟೋ ವರ್ಷಗಳು ನಾನು ಕುರೂಪಿ ಅನ್ನೋ ಭಾವನೆನೇ ಬಂದಿರ್ಲಿಲ್ಲ, ಅವ್ವ, ಯಾವತ್ತೂ ನನ್ನ ಕುರೂಪಿ ಅಂತ ಹೇಳಿರ್ಲಿಲ್ಲ, ಆ ಭಾವನೆನೂ ಬೆಳಸಿರಲಿಲ್ಲ, ಅವಳು ನನ್ನ ಕುರೂಪಿ ಅಂತ ಅಂದ್ಕಂಡೆ ಇರ್ಲಿಲ್ಲ, ನೆಮ್ಮದಿ ತುಂಬಿ ಬೆಳಸಿದ್ದ ಅವ್ವನ ಮಾತ್‌ನ ಹೈಸ್ಕೂಲಿಗೆ ಬಂದ್ಮೇಲೆ ಯಾಕೆ ನಂಬೋದು ಬಿಟ್ಟೆ ? ಹೈಸ್ಕೂಲಿನ ವಾತಾವರಣ, ಕಾಲೇಜಿನ ವಾತಾವರಣ ಹೆಚ್ಚು Influential ಆಗಿತ್ತು ಆಗ. ಚೆನ್ನಾಗಿದ್ರೆ ಎಲ್ಲರು ಗಮನಿಸೋರು, ಮನ್ನಣೆ ನೀಡೋರು. ಅದೂ ಚೆನ್ನಾಗಿರೋ ಹುಡ್ಗೀರು ಓದ್‌ನಲ್ಲೂ ಮುಂದಿದ್ದರಂತು ಆಯ್ತು ಅವಳು ದೇವತೇನೆ! ಉಳಿದೋರು ಸೇವಕರು. ಮಾತ್ ಕೇಳಿಲ್ಲ ಅಂದ್ರೆ ಇರೋ ಮೂತಿ ನೋಡು, ಅಂದ್ರು ಎಷ್ಟ್ ಸೊಕ್ಕು ಅನ್ನೋ ಮಾತು ರೆಡಿಯಾಗಿರೋದು. ಒಟ್ನಲ್ಲಿ ಏನ್ ಮಾಡೋಕೂ ಚೆನ್ನಾಗಿರೊ ಒಂದು ಅರ್ಹತೆ ಬೇಕು ! ಇವರ ಕಣ್ಣಿಗೆ ಚೆನ್ನಾಗಿಲ್ಲ ಅನ್ನೋ ಕಾರಣಕ್ಕೆ ಅಸಹನೆಗೆ, ಅಸಡ್ಡೆಗೆ ಗುರಿಯಾಗೋದನ್ನ Witness ಮಾಡ್ತಾ ಇದ್ದೆ, ನಾನೂ ಅನುಭವಿಸ್ತಾ ಇದ್ದೆ. ಒಳಗೊಳಗೆ ಕೀಳರಿಮೆ ಅನುಭವಿಸಿ Ugly ಆಗ್ತಾ ಇದ್ದೆ.

ಜನರು ಗಮನ ನೀಡೋ ಸುಂದರಿಯಲ್ಲ ಅಂದ್ಮೇಲೆ ಬೇರೇನಾದ್ರು ಆಗ್ಬೇಕು ಅಂತ ಮನಸು ಬಯಸೋದು, ಚೆನ್ನಾಗಿಲ್ಲ ಅಂದ್ರು ಹುಡುಗಿದ್ ಒಳ್ಳೇ ಗುಣ ಅಂತಾ ಎಲ್ರು ಅನ್ನೋರು. ಆಗೆಲ್ಲ ಅದೊಂತರ ಯಾರೊ ಅಯ್ಯೊ ಪಾಪ ಅಂತ ಹಾಕೊ ಭಿಕ್ಷೆ ಅನ್ನೋದು. ನಾನ್ ಏನೂ ಅಂತ Prove ಮಾಡೋಕೆ ಏನಾದ್ರು Different ಆಗಿ ಮಾಡಿತೋರ್ಸ್

ಬೇಕು. ಈ ಸೌಂದರ್ಯಕ್ಕೆ Compensate ಆಗೋ ಅಂತಾದ್ದನ್ನು ಮಾಡ್‌ಬೇಕು ಅಂತಾ ಎಷ್ಟ್ ತೀವ್ರವಾಗಿ ಅನ್‌ಸೋದು. ಕಷ್ಟಪಟ್ಟು ಓದಬೇಕು, IAS, IPS ಮಾಡ್ಬೇಕು, ಈಜ್ ಕಲೀಬೇಕು, ಸಂಗೀತ ಕಲೀಬೇಕು (ಮಾದಿಗ್ರ ಹುಡ್ಗಿ ಸಂಗೀತ ಕಲ್ತಿರೋದನ್ನು ನೋಡಿ ಜನ ವಾಹ್ ಅನ್ಲಿ ಅಂತಾ) ಅಂತ ತುಂಬಾ ಶ್ರಮ ಹಾಕ್ದೆ. ಸೌಂದರ್ಯ ಹೆಂಗ್‌ಸ್ರಿಗೆ ಒಂದು Power, It's an asset ! ನನಗೆ ಅದು ಇರ್ಲಿಲ್ಲ, ಅದಕ್ಕೆ ಇನ್ನೊಂದು Power ಪಡ್ಕೋಳೊ ಹುಚ್ಚು ಹಿಡೀತು. ಸಿನೀಮಾದಲ್ಲಿ ಲೇಡಿ ಪೋಲೀಸ್‌ಗಳು, ಅಧಿಕಾರಿಗಳು ದರ್ಪದಿಂದ ಅಧಿಕಾರ ಚಲಾಯಿಸೋದನ್ನ ನೋಡಿ ಎಷ್ಟು ಥ್ರಿಲ್ ಆಗ್ತಾ ಇದ್ದೆ. Pant, Shirt ಹಾಕ್ಕೊಂಡಾಗ ಒಂದ್ ರೀತಿ ಹಮ್ಮು ! Thrilling, adventuristic ಕಥೆ ಪುಸ್ತಕಗಳ ಮುಂದೆ ಬೇರೆ ಪುಸ್ತಕಗಳು ತಗಡು ಅನ್ನೋದು. ಆದ್ರೆ ಎದೆಯ ಮಾತುಗಳನ್ನ ಪದವಾಗಿಸೋದು ನಂಗ್ ಬರ್ತಾ ಇತ್ತು. ತಲೆಯೊಳಗೆ ಕೊರೆಯೊ ಗೆರೆಗಳ್‌ನ ಹಾಳೆ ಮೇಲೆ ಮೂಡ್‌ಸೋಕ್ ನಂಗೆ ಆಗೋದು, ಶ್ರದ್ಧೆಯಿಂದ ದುಡಿಯೋ ಶಕ್ತಿ ನಂಗ್ ಇತ್ತು. ಇದ್ಯಾವುದನ್ನು ಸೌಂದರ್ಯ ಅಂದ್ಕೋಳೋ ಸ್ಥಿತಿಯಲ್ಲಿ ನಾನಿರ್ಲಿಲ್ಲ, ಈ ಸ್ಥಿತಿ ತುಂಬಾ ದಿನ ಮುಂದ್‌ವರಿಲಿಲ್ಲ, ಆ ಸಮಯದಲ್ಲಿ ನಂಗೆ ಸಿಕ್ಕ ಮೇಷ್ಟ್ರು, ಮಹಿಳೆಯರ ಬಗ್ಗೆ ಬೇರೇನೇ ರೀತಿ ಯೋಚಿಸೋದನ್ನ ಕಲಿಸಿದ ಸಂಘಟನೆ, ಅಲ್ಲಿ ಗೆಳತಿಯರು, ಸಣ್ಣತನವನ್ನು ಸದ್ದಿಲ್ಲದೆ ತೋರಿಸಿಕೊಟ್ಟ ಬೆಟ್ಟದಂತಾ ನನ್ನವ್ವ ನನ್ನನ್ನು ಭ್ರಮೆಯಿಂದ ಈಚ್ ಎಳ್‌ದ್ರು, ಈಗ ಆ ಹುಚ್ಚು ಭ್ರಮೆ ಇಲ್ಲದೆ ನಿರಾಳ ಅನ್ನಿಸುತ್ತೆ. ಜಗತ್ತಿಗೆ Prove ಮಾಡಿತೋರ್ಸ್‌ಬೇಕು ಅನ್ನೋ Burden ಇಲ್ದೆ ಹಗುರ ಅನ್ಸುತ್ತೆ.

ಅವ್ವ ಹೇಳೋಳು "ಆ ಭಗ್‌ವಂತ್ ಕೊಟ್ಟರೋ ಮೈ ಅಂದೆಂಗೈತೋ ಅಂಗ್ ಇಟ್ಕಳ್ರಿ, ಅದ್ಯಾಕ್ ಇಲ್ಲುದ್ ಮಾಡ್ಕತೀರಾ, ಎಷ್ಟ್ ಮಾಡ್ ಕಂಡ್ರುವೆ ಅಷ್ಟೇಯಾ, ಮೂಗ್ ಮೂಗೆಯಾ, ಕಣ್ ಕಣ್ಣೆಯಾ, ಮೈ ಮುರ್ದು ದುಡಿಬೇಕು, ಶಿವಾ ನೀನ್ ಕೊಟ್ಟಿದ್ದಪ್ಪಾ ಅಂತ ಒಟ್ ತುಂಬಾ ಉಣ್‌ಬೇಕು. ಒಂದಿಡಿ ಎಚ್ಚಾಗುಂಡ್ರೆ, ಇನ್ನೊಬ್ರನ್ನ ಕಿತ್ಕುಂಡಂಗೆ ತಿಳ್ಕಾ, ಅವನ್ ಕರ್‍ಯಾಗ ತಲೆ ತಗ್ಗಿಸ್‌ಕಂಡ್ ನಡ್ಬ್‌ಬುಡ್‌ಬೇಕು". ಅವ್ವನ ಮಾತು ಉಸಿರಾಡೋ ಗಾಳಿ ಅಷ್ಟ ಸತ್ಯ ಅನ್ಸುತ್ತೆ. ನನ್ನ ಇಂದಿನ ಸ್ಥಿತಿ ಧುತ್ ಅಂತ ಬಂದಿದ್ದಲ್ಲ ಅದರ ಹಿಂದೆ ದೊಡ್ಡ ಗುದ್ದಾಟಾನೆ ಇದೆ, ನೋವು, ಅವಮಾನಗಳು, ಆತ್ಮೀಯರ ವಿಶ್ವಾಸ, ಹಾರೈಕೆ, ಎಲ್ಲಾ ಹುಚ್‌ತನಗಳನ್ನು ಸಹಿಸಿಕೊಳ್ಳೋ ನನ್ನಪ್ಪ ಅಲ್ಲದೆ 'ಕಸ'ವನ್ನು ತೊಳೆದು ಹಾಕೊ ನನ್ನವ್ವ ಎಲ್ಲವೂ ನಾನು ಕುರೂಪಿಯಲ್ಲ ಅನ್ನೋ ಭಾವನೆ ಹೋಗೋಕೆ ಕಾರಣ.

(ಕೃಪೆ : ಮಾನಸ ಸೆಪ್ಟೆಂಬರ್ - ಅಕ್ಟೋಬರ್ 1996)

(ಇದು ಒಂದು ರೀತಿಯಲ್ಲಿ ಪ್ರಕರಣವೇ (Case Study) ಆಗಿದೆ. ವಾಸ್ತವ ಅನುಭವವನ್ನೇ ಬರವಣಿಗೆಯಲ್ಲಿ ತೆರೆದಿಡುವ ರೀತಿ ಚೆನ್ನಾಗಿದೆ. ಕಾರ್ಯಕ್ಷೇತ್ರದಲ್ಲಿ ಕಂಡು ಬರುವ ಅಥವಾ ನೀವೇ ಅನುಭವಿಸಿರುವ ಪ್ರಕರಣಗಳನ್ನು ಇಂತಹ ಒಂದು ಸ್ವರೂಪಕ್ಕೆ ಹಾಕಿಯೂ ಬಳಸಬಹುದು.)



# ಸಖೀ-ಸಹಗಮನ

'ಸಖಿ' ಎಲ್ಲ ಸಾಮಾನ್ಯ ಹೆಂಗಸರ ಬುದ್ಧಿಮತ್ತೆಯ ಪ್ರತಿನಿಧಿ. 'ಸಖಿ' ಒಬ್ಬ ನಿರ್ದಿಷ್ಟ ವ್ಯಕ್ತಿಯಲ್ಲ, ಹಾಗೆಂದು ಆಕೆ ಕಲ್ಪನೆಯ ಕೂಸೂ ಅಲ್ಲ. ಈ ಎಲ್ಲ ಕತೆಗಳು ವಾಸ್ತವದ ಗಟ್ಟಿ ನೆಲೆಯಲ್ಲಿ ಜರಗಿದಂತಹವು. ಇಲ್ಲಿನ ಪ್ರತಿ ಸಂದರ್ಭದಲ್ಲೂ ವಿಭಿನ್ನ ಹಿನ್ನೆಲೆ, ವ್ಯಕ್ತಿತ್ವದ ಹಣ್ಣಿನಲ್ಲಿ ಒಬ್ಬ ಸಖಿ ಕಾಣಿಸಿಕೊಂಡಿದ್ದಾಳೆ. 'ಸಖೀ ಸಹಗಮನ' ಜನವಾಹಿನಿ ದೈನಿಕದ ವಾರದ ಒಂದು ಅಂಕಣವಾಗಿ ಬರುತ್ತಿದೆ. ಪ್ರಕರಣಗಳನ್ನು ದಾಖಲಿಸಿ, ಪಸರಿಸುವುದಕ್ಕೆ ಇದು ಒಂದು ಉದಾಹರಣೆ...

## ವೇಶ್ಯಾವೃತ್ತಿ ಅನಿವಾರ್ಯ ?

ಮಹಿಳಾ ಸ್ಥಾನಮಾನದ ಬಗ್ಗೆ ಒಂದು ಗುಂಪಿಗೆ ವಿಚಾರಗಳನ್ನು ಮುಂದಿಡುತ್ತಿದ್ದೆ. ನನ್ನ ಪ್ರೀತಿಯ ವಿಷಯ. ಸ್ವಲ್ಪ ಆವೇಶವೂ ಸೇರಿಕೊಂಡಿತ್ತು. ಮಾತಾಡುತ್ತ ವೇಶ್ಯಾವೃತ್ತಿಯ ಪ್ರಸ್ತಾಪ ಬಂದಿತ್ತು. ಸ್ವಲ್ಪ ಹೊತ್ತಿನಲ್ಲೇ ಒಬ್ಬ ಯುವಕ ಏನೋ ಕೇಳಲು ಎದ್ದು ನಿಂತ. ನನ್ನ ಮಾತುಗಳನ್ನು ಕೇಳಿ ಪ್ರಶ್ನೆಯೊಂದಕ್ಕೆ ತಯಾರಾದವರನ್ನು ಪ್ರೋತ್ಸಾಹಿಸುತ್ತಾ, ಅವನಿಗೊಂದು ಬುದ್ಧಿವಂತಿಕೆಯ ಉತ್ತರ ಕೊಡುವುದಕ್ಕೆ ತಯಾರಾದೆ. ಅವನು ಪ್ರಾರಂಭಿಸಿಯೇಬಿಟ್ಟ...

'ಅಲ್ಲಾ.. ಮೇಡಂ, ನಮ್ಮ ಸಮಾಜದಲ್ಲಿ ವೇಶ್ಯಾವೃತ್ತಿ ಇರುವುದು ಅಗತ್ಯವಂತೆ ಅಲ್ಲವೇ ? ವೇಶ್ಯಾವೃತ್ತಿ ಇಲ್ಲದೇ ಹೋಗಿದ್ದರೆ, ಗೌರವಸ್ಥ ಕುಟುಂಬದ ಹೆಣ್ಣು ಮಕ್ಕಳು ದಾರಿಯಲ್ಲಿ ನಡೆಯಲು ಸಾಧ್ಯವಿರುತ್ತಿರಲಿಲ್ಲ ನೋಡಿ... ಲೆಕ್ಕವಿಲ್ಲದಷ್ಟು ರೇಪ್‌ಗಳು ನಡೆಯುತ್ತಿದ್ದವು. ವೇಶ್ಯಾವೃತ್ತಿ ಇರುವುದರಿಂದ ನಮ್ಮ ಹೆಣ್ಣು ಮಕ್ಕಳು ಸುರಕ್ಷಿತವಾಗಿದ್ದಾರೆ' ಒಂದೇ ಉಸಿರಿಗೆ ಹೇಳಿದ. ನನ್ನ ಸಿಟ್ಟು ನೆತ್ತಿಗೇರುತ್ತಿತ್ತು. ಸಂಬದ್ಧವೋ, ಅಸಂಬದ್ಧವೋ ಇಂತಹ ವಾದಗಳು ವೇಶ್ಯಾವೃತ್ತಿಯನ್ನು ಸಮರ್ಥಿಸುವುದಂತೂ ಹೌದು. ಅಷ್ಟೇ ಅಲ್ಲ, ಗಂಡಸರ ವರ್ತನೆಗೆ ಲಗಾಮು ಹಾಕಬೇಕಾದರೆ ಒಂದಷ್ಟು ಮಹಿಳೆಯರು ಬಲಿಯಾಗಬೇಕು ಎಂದು ತಾನೇ ಇದರ ಅರ್ಥ. ಅಸಹನೆಯಿಂದ ಹೂಂ ಗುಟ್ಟಿದ್ದೆ.

ಪ್ರತಿರೋಧಿಸಲು ನೂರಾರು ವಿಚಾರಗಳು ಮನಸ್ಸಿನೊಳಗೆ ಬರುತ್ತಿದ್ದರೂ, ಸಮರ್ಥವಾಗಿ ಹೇಗೆ ರೂಪಿಸುವುದು ಅಂತ ತಿಳಿಯದೆ ಒಳಗೊಳಗೇ ಕಕ್ಕಾಬಿಕ್ಕಿಯಾಗಿದ್ದೆ. ತರಬೇತಿದಾರಳ ಸ್ಥಾನದಲ್ಲಿ ಸಮಾಧಾನದಿಂದ ವ್ಯವಹರಿಸುವುದು ಅನಿವಾಯರ್ವಾಗಿತ್ತು. ತಡವರಿಸುತ್ತಾ, 'ಹಾಗಲ್ಲ...' ಎಂದು ಶುರು ಮಾಡಿದೆ.

'ನೀವೆಂದಾದರೂ ವೇಶ್ಯೆಯರ ಬಳಿ ಹೋಗಿದ್ದೀರಾ ?'

ಬಾಣದಂತೆ ಎಗರಿತ್ತು ಅವನ ಮೇಲೆ, ಸಖಿಯ ಪ್ರಶ್ನೆ. ನನ್ನ ತಡವರಿಕೆಯನ್ನು ನೋಡಿ ಸಣ್ಣಕ್ಕೆ ಖುಶಿಪಡುತ್ತಿದ್ದ ಅವನಿಗೆ ಈ ಪ್ರಶ್ನೆ ಎದುರಿಸುವುದಕ್ಕಾಗಲಿಲ್ಲ.

'ಇಲ್ಲ... ಇಲ್ಲ... ನಾನು ಹೋಗಿಲ್ಲ' ಬಾಯಿ ಪಸೆ ಆರಿದಂತೆ ಮಾತು ಹೊರಬಿತ್ತು.

'ಹಾಗಾದರೆ ಯಾರನ್ನಾದರೂ ರೇಪ್ ಮಾಡಿರಲೇ ಬೇಕಲ್ಲಾ' ಸಖಿಯ ಎರಡನೆ.. ಅಲ್ಲ ಕೊನೆಯ ಪ್ರಶ್ನೆ ಅವನ ಮುಖಕ್ಕೆ ಅಪ್ಪಳಿಸಿತ್ತು.

## ಉಲ್ಲಾಸಕ್ಕಾಗಿ ಚಾ

ಆ ದಿನಗಳಲ್ಲಿ ಸಖಿಯ ಅತ್ತೆಯೂ ಮನೆಯಲ್ಲಿದ್ದರು. ಊಟದ ಬಳಿಕ ಅತ್ತೆ ಬೀಡಿ ಕಟ್ಟುತ್ತಿದ್ದರೆ, ಸಖಿಯು ಪಕ್ಕದಲ್ಲೇ ಸಹಾಯ ಮಾಡುತ್ತಾ ಕುಳಿತಿದ್ದಳು. ಸಖಿಯ ಗಂಡ ಮಾತ್ರ ಒಂದು ಗಡದ್ದು ನಿದ್ದೆ ಹೊಡೆದು, ಮೈ ಕೈ ಮುರಿಯುತ್ತಾ ಎದ್ದು ಬಂದನು. 'ಒಂದು ಚಾ ಮಾಡಿಕೊಟ್ಟರೆ ಉಲ್ಲಾಸವಾಗುತ್ತಿತ್ತು' ಎಂದು ಹೇಳಿ ಕಾಯುತ್ತಾ ಕುಳಿತನು. ಅತ್ತೆ, ಸೊಸೆ ಇಬ್ಬರಿಗೂ ಒಂದಿಷ್ಟು ಬೀಡಿ ಮುಗಿಸಲೇ ಬೇಕಾಗಿತ್ತು. ಅವಸರದಲ್ಲಿ ಲೆಕ್ಕ ಮಾಡುವುದು, ಕಟ್ಟ ಮಾಡಿಡುವುದು, ತಿರುಗಿಸಿ ಸರಿ ಮಾಡುವುದು ಮಾಡುತ್ತಲೇ ಇದ್ದರು. ಎದ್ದು ಚಾ ಮಾಡಿ ಕೊಡುವುದು ಇಬ್ಬರಿಗೂ ಗಮನಕ್ಕೇ ಬರಲಿಲ್ಲ. ಅವರತ್ತಲೇ ನೋಡುತ್ತಾ ಕಾಯುತ್ತಿದ್ದ ಸಖಿಯ ಗಂಡ ಮತ್ತೊಮ್ಮೆ ಚಾ ಬೇಕೆಂದು ನೆನಪಿಸಿದ.

ಅಷ್ಟರಲ್ಲಿ ಸಖಿಯ ಅತ್ತೆಯೇ ಮಗನಿಗೆ ಹೇಳಿದರು, 'ಅವರವರೇ ಚಾ ಮಾಡಿಕೊಂಡು ಕುಡಿದರೆ ಇನ್ನೂ ಹೆಚ್ಚು ಉಲ್ಲಾಸವಾಗುತ್ತದೆ. ಮಾಡಿ ನೋಡು'.

ಸಖಿಯ ಗಂಡ ಇನ್ನು ಪ್ರಯೋಜನವಿಲ್ಲವೆಂದುಕೊಂಡು ಎದ್ದು ಅಡುಗೆ ಕೋಣೆಯತ್ತ ನಡೆದ.

ಹಿಂದಿನಿಂದಲೇ, ಸಖಿಯ ಅತ್ತೆ, ನಗು ನಗುತ್ತಲೇ 'ನಿನಗೆ ಮಾತ್ರ ಅಲ್ಲ, ಮಾಡಿಕೊಟ್ಟರೆ ನಾವು ಕುಡೀತ್ತೇವೆ. ಕೆಲಸ ಮಾಡ್ಲಿಕ್ಕೆ ನಮಗೂ ಉಲ್ಲಾಸ ಬರುತ್ತದೆ, ಮಾಡ್ತೀಯಾ' ಎಂದರು.

## ಪರಿಹಾರವೇನು ?

ಅಂದು ಏಳೆಂಟು ಜನರು, ನನ್ನನ್ನು ಭೇಟಿಯಾಗುವುದಕ್ಕೆ ಬಂದಿದ್ದರು. 'ಏನಾಗಬೇಕಿತ್ತು ?' ಅಂತ ವಿಚಾರಿಸಿದೆ.

'ನಮ್ಮ ಊರಲ್ಲೊಂದು ಮಹಿಳಾ ಸಂಘ ಮಾಡುವುದಕ್ಕೆ ನಿಮ್ಮ ಸಹಕಾರ ಬೇಕಿತ್ತು' ಅಂದರು ಬಂದವರು. ನಾಲ್ಕು ಜನ ಗಂಡಸರೂ, ಇಬ್ಬರು ಹೆಂಗಸರೂ ಇದ್ದರು. ಮಾತನಾಡುತ್ತಿದ್ದವರು ಗಂಡಸರೆ.

'ಬಹಳ ಒಳ್ಳೆಯ ವಿಷಯ. ಆದರೆ ನಿಮಗೆ ನಿಮ್ಮ ಊರಲ್ಲಿ ಮಹಿಳಾ ಸಂಘವೊಂದು ಬೇಕೆಂದು ಯಾಕೆನಿಸಿತು ?' ಮಾತುಕತೆ ಬೆಳೆಸುತ್ತಾ ಅವರನ್ನು ಅರ್ಥಮಾಡಿಕೊಳ್ಳುವುದಕ್ಕಾಗಿ ಕೇಳಿದೆ.

ಹೆಚ್ಚು ತಡಮಾಡದೆ ಶುರು ಮಾಡಿದರು, 'ನಮ್ಮ ಹೆಂಗಸರಿಗೆ ಒಂದು ರೀತಿ ನೀತಿ ಅಂತ ಇಲ್ಲ, ಬೆಳಗ್ಗೆ ಸಂಜೆ ನಳ್ಳಿ ನೀರು ಹಿಡಿಯುವಾಗಲಂತೂ ಇವರ ಕಿತ್ತಾಟ ನೋಡಿದರೆ ಅಸಹ್ಯವಾಗುತ್ತದೆ. ಏನೇನೋ ಬೈಕೊಳ್ತಾರೆ. ಕೆಲವೊಮ್ಮೆ ಜುಟ್ಟು ಹಿಡಿದು ಎಳೆದು ಕಿತ್ತಾಡುತ್ತಾರೆ. ಮರ್ಯಾದೆನೇ ಇಲ್ಲ, ಇವರ ಜಗಳದಿಂದಾಗಿ, ನಮ್ಮ ಊರಿನ ನೆಮ್ಮದಿಯೇ ಹಾಳಾಗಿದೆ. ನೀವೆಲ್ಲಾ ಸಹಾಯ ಮಾಡಿ, ಒಂದು ಮಹಿಳಾ ಸಂಘ ಮಾಡಿಸಿಕೊಟ್ಟರೆ ಇವರು ಸ್ವಲ್ಪ ಸರಿಯಾಗಬಹುದೇನೋ ಅಂತ ನಮ್ಮ ಆಸೆ...'

ಮಹಿಳಾ ಸಂಘ ಮಾಡುವುದಕ್ಕೆ ಇಂತಹ ಒಂದು ಕಾರಣವನ್ನು, ಅದೂ ಗಂಡಸರು ಹೇಳುತ್ತಿರುವಾಗ, ಒಳಗೊಳಗೇ ಕೋಪ ಬಂತು. ತಕ್ಷಣಕ್ಕೆ ಹೇಗೆ ವ್ಯವಹರಿಸಬೇಕೆಂದು ಹೊಳೆಯಲಿಲ್ಲ, ಅಷ್ಟರಲ್ಲೇ ಪಕ್ಕದಲ್ಲಿ ಇದ್ದ ಸಖಿಯ ಕಣ್ಣುಗಳಲ್ಲಿ ತುಂಟ ನಗುವೊಂದನ್ನು ನೋಡಿದೆ.

ನಿಭಾಯಿಸಲು ಸಖಿಗೆ, ನಾನೇ ಬಿಟ್ಟುಕೊಡುವ ರೀತಿಯಲ್ಲಿ, 'ಏನು ಸಖೀ, ನೀನೇನು ಹೇಳುತ್ತಿಯಾ ಇವರಿಗೆ ?' ಎಂದೆ.

'ಈಗ ಸಮಸ್ಯೆ ಬಂದಿರುವುದು ಯಾರಿಂದ ?' ಸಖಿ ಕೇಳಿದಳು.

'ನಮ್ಮ ಹೆಂಗಸರಿಂದ' ತಡಮಾಡದೆ ಉತ್ತರಿಸಿದರು ಬಂದವರು.

'ಹಾಗಾದರೆ ನಾಳೆಯಿಂದ ಹೆಂಗಸರು ನೀರಿಗೆ ಹೋಗುವುದು ಬೇಡ' ಸಖಿ ಪರಿಹಾರ ಹೇಳಿದಳು.

'ಮತ್ತೆ' ದಿಗಿಲಾಗಿ ಕೇಳಿದರು ಬಂದವರು !

ಏನೂ ವಿಶೇಷವಿಲ್ಲವೆಂಬಂತೆ ಸಖಿ ಹೇಳಿದಳು,

'ನೀವು ಗಂಡಸರೇ ಹೋಗಿ ನೀರು ತನ್ನಿ, ಸಮಸ್ಯೆಯೇ ಇಲ್ಲವಲ್ಲಾ'.

## ಹಾಲು - ಹೆಪ್ಪು - ಮೊಸರು ?

ಸಖಿಯ ಬಳಿ ಆರಾಮವಾಗಿ ಹರಟುತ್ತಿದ್ದ ಒಂದು ಸಂದರ್ಭ.

'ಸಖೀ ನೀವೆಲ್ಲಾ ಪರವಾಗಿಲ್ಲ, ನಿಮ್ಮ ಮನೆತನದಲ್ಲಿ ಒಳ್ಳೆ ಘಾಟಿ ಹೆಂಗಸರೇ ಇದ್ದೀರಿ. ನೀನಾಗಲೀ, ನಿನ್ನ ಅತ್ತೆಯಾಗಲಿ ಬೇರೆಯವರಿಗೆ ತಲೆ ಒಂದು ಬಗ್ಗಿಸಲಾರಿರಿ. ಅಲ್ಲವೇ' ಎಂದೆ.

ಆಗ ಸಖಿ, ತನ್ನ ತಲೆಮಾರಿನ ಮೊತ್ತೊಬ್ಬ ಘಾಟಿ ಹೆಂಗಸಿನ ಕಥೆಯೊಂದನ್ನು ಹೇಳಿದಳು. ಆ ಹೆಂಗಸು ಹಳ್ಳಿಯ ಬಡತನದ ಬದುಕು ನಡೆಸುತ್ತಿದ್ದಳು. ಮದುವೆಯಾಯಿತು. ಮಗುವೂ ಆಯಿತು. ಮಗುವಾದ ಕೆಲವೇ ದಿನಗಳಲ್ಲಿ ಆಕೆಯ ಗಂಡ ಊರು ಬಿಟ್ಟು ಹೇಳದೆ ಕೇಳದೆ ಹೊರಟು ಹೋದ. ಎಳೆ ವಯಸ್ಸು ! ಪುಟ್ಟ ಮಗುವನ್ನು ಹಿಡಿದುಕೊಂಡು ಒಂಟಿಯಾಗಿ ಬದುಕಬೇಕಾಯಿತು. ಹೇಗೋ ಕೂಲಿ ನಾಲಿ ಮಾಡಿ ಮಗನನ್ನು ಬೆಳೆಸಿದಳು.

ಮಗನಿಗೆ ಹನ್ನೆರಡೋ ಹದಿಮೂರೋ ವರ್ಷ ವಯಸ್ಸಾದಾಗ ಈ ಗಂಡ ಅನ್ನಿಸಿಕೊಂಡವನು ವಾಪಸ್ಸಾದ. ಬೇರೇನೂ ಮಾತಿಲ್ಲ. ಮಗನನ್ನು ತನಗೆ ಕೊಡು ಅಂದ. ಅವಳು ಒಪ್ಪಲಿಲ್ಲ. ಪಂಚಾಯ್ತಿಯೇ ಕರೆಸಿಬಿಟ್ಟ.

ಪಂಚಾಯ್ತಿಯಲ್ಲೇನೂ, ಆಕೆಯ ಗೋಳಿಗೆ, ನೋವಿಗೆ ಅರ್ಥವೇ ಸಿಗಲಿಲ್ಲ. 'ಮಗನಿಗೆ ಮರ್ಯಾದೆ ಸಿಗುವುದು ತಂದೆಯ ಹೆಸರಿನಿಂದ' ಎಂದು ತಂದೆಗೇ ಮಗನನ್ನು ಒಪ್ಪಿಸಿ ಬಿಡುವುದರಲ್ಲಿದ್ದರು. ಅಷ್ಟರಲ್ಲಿ ಸಖಿಯ ಈ ಅಜ್ಜಿ ಒಂದು ಪ್ರಶ್ನೆ ಕೇಳಿದಳು. ಪಂಚಾಯ್ತಿ ಕಟ್ಟೆಯಲ್ಲಿದವರು, ಸಭಿಕರು ಎಲ್ಲರೂ ದಂಗಾದರು. ಮಗನನ್ನು ತಾಯಿಗೇ ಒಪ್ಪಿಸಿಬಿಟ್ಟರು.

ಆಕೆ ಸಭೆಯ ಮುಂದೆ ಇಟ್ಟ ಪ್ರಶ್ನೆ ಇಷ್ಟೆ. 'ನಿಮ್ಮ ಮನೆಯಲ್ಲಿ ಒಂದು ಪಾತ್ರೆ ಹಾಲಿದೆ. ಪಕ್ಕದ ಮನೆಯಿಂದ ಹೆಪ್ಪು ತಂದು ಹಾಕುತ್ತೀರಿ. ಮರುದಿನ ಮೊಸರು ಆಗುತ್ತದೆ. ಆಗ ಪಕ್ಕದ ಮನೆಯವರು ಬಂದು, 'ಈ ಮೊಸರು ನಮ್ಮದು, ನಮಗೆ ಕೊಡಿ' ಅನ್ನುತ್ತಾರೆ. ನೀವೇನು ಮಾಡುತ್ತೀರಿ ? ಕೊಟ್ಟು ಬಿಡುತ್ತೀರಾ ?'

# ಅಮಲಿನಲ್ಲಿ...

(ಇದು ಸಮುಖ್ಯಾ ಕ್ಷೇತ್ರದಲ್ಲೇ ನಡೆದ ಪ್ರಕರಣವಾಗಿದ್ದು ಈ ಪುಸ್ತಕದಲ್ಲೇ ಇದನ್ನು ಉಪಯೋಗಿಸಲಾಗಿದೆ. ಪುಟ42 ಅದೇ ಪ್ರಕರಣವನ್ನು ಸಖೀ-ಸಹಗಮನದಲ್ಲಿ ಈ ರೀತಿಯಾಗಿ ಬಳಸಲಾಗಿದೆ.)

ನಾನೂ - ಸಖಿ ಅವಳ ಊರಿನ ಪಕ್ಕದಲ್ಲೇ ಹಾದು ಹೋಗುತ್ತಿದ್ದವು. ಮುಸ್ಸಂಜೆ ಹೊತ್ತು. ಎದುರಿನಿಂದ ಯಾವನೋ ಒಬ್ಬ ಕುಡಿದು ತೂರಾಡಿಕೊಂಡು ಏನೇನೋ ಮಾತಾಡಿಕೊಳ್ಳುತ್ತಾ ಬರುತ್ತಿದ್ದನು. ನಮ್ಮ ಹತ್ತಿರ ಬರುತ್ತಿದ್ದಂತೆಯೇ ನಮ್ಮನ್ನು ಗಮನಿಸಿದವನೇ ತಕ್ಷಣ ಮೌನವಾಗಿಬಿಟ್ಟ. ನನಗೆ ಆಶ್ಚರ್ಯವಾಯಿತು. ಸಖಿಯನ್ನು ವಿಚಾರಿಸಿದೆ.

'ಇವನೇ ಅಂದು ಒಮ್ಮೆ ನಮ್ಮಿಂದ ಸರಿಯಾಗಿ ಪೂಜೆ ಮಾಡಿಸಿಕೊಂಡವನು' ಸಖಿ ಹಿಂದಿನ ಘಟನೆಯನ್ನು ನೆನಪಿಸಿದಳು.

ಅಂದು ಊರಿನ ಯಾವುದೋ ಜಾತ್ರೆ ನಡೆದಿತ್ತು. ಇವನು ಊರಿನಲ್ಲಿ ಸ್ವಲ್ಪ ಹಣ, ಅಧಿಕಾರ ಇರುವ ವ್ಯಕ್ತಿ. ಜಾತ್ರೆಯ ದಿನದಂದು ಕೂಡಾ ಕುಡಿದುಕೊಂಡು ಬಂದು, ಕೋಲಾಟ ಆಡುತ್ತಿದ್ದ ಊರ ಗಂಡಸರ ಮುಂದೆ, ಹೆಂಗಸರಿಗೂ ಕೇಳಿಸುವಂತೆ ಅವಾಚ್ಯ ಮಾತುಗಳನ್ನು ಆಡುತ್ತಿದ್ದ. ಲಗಾಮಿಲ್ಲದಂತೆ ಮಾತಾಡಿದ್ದ. ಕೊನೆಗೆ, 'ನಿಮ್ಮ ಹೆಂಡಂದಿರನ್ನೆಲ್ಲಾ ನಾನು ಹಾಳು ಮಾಡುತ್ತೇನೆ. ನೋಡಿಕೊಳ್ಳಿ' ಎನ್ನುವಲ್ಲಿವರೆಗೆ ಹೋಗಿದ್ದ.

ಕುಡಿದವನೊಂದಿಗೆ ಏನು ವ್ಯವಹಾರ ಎಂದು ಎಲ್ಲರೂ ಸ್ವಲ್ಪ ಸುಮ್ಮನಿದ್ದರು. ಜೊತೆಗೆ ಅವನ ಬಗ್ಗೆ ಸ್ವಲ್ಪ ಹೆದರಿಕೆಯೂ ಇತ್ತು. ಆದರೆ ಸಖಿ ಮತ್ತು ಅವಳ ಮಹಿಳಾ ಗುಂಪಿನವರು ಇದನ್ನು ಇಷ್ಟಕ್ಕೇ ಬಿಡಲಿಲ್ಲ. ರಾತ್ರಿಯೇ ಸೇರಿಕೊಂಡು, ಮಾತಾಡಿಕೊಂಡು, ಮರುದಿನ ಬೆಳಿಗ್ಗೆ, ಅವನಿನ್ನೂ ಏಳುವುದಕ್ಕೆ ಮೊದಲೇ ಹೋಗಿ ಅವನ ಮನೆ ಬಾಗಿಲು ತಟ್ಟಿದರು. ಸ್ವಲ್ಪ ಹಿರೀ ವಯಸ್ಸಿನ ಹೆಂಗಸರೇ ಮುಂದೆ ನಿಂತಿದ್ದರು. ಕೂಗಲಿಲ್ಲ, ಕಿರುಚಲಿಲ್ಲ, ವಾದಿಸಲಿಲ್ಲ ಬಹಳ ಸಲೀಸಾದ ವ್ಯವಹಾರ ಎಂಬಂತೆ,

'ನಿನ್ನೆ ಏನೇನೋ ಹೇಳ್ತಿದ್ದೆಯಲ್ಲಾ, ಈಗ ನೋಡು ನಾವು ಇಷ್ಟು ಜನ ಬಂದಿದ್ದೇವೆ. ಯಾರ ಹೆಂಡರು ಬೇಕು ನಿನಗೆ ಹೇಳು...' ಎಂದು ಹೇಳಿ ಅವನನ್ನು ಹೊರಗೆ ಕರೆದರು.

ಹೆಂಗಸರ ಈ ರೂಪ ಅವನು ಈ ಮೊದಲು ನೋಡಿರಲಿಲ್ಲ. ತಪ್ಪಾಯಿತು. ಏನೋ ಕುಡಿದು ಹೇಳಿದೆ. ಬಿಟ್ಟುಬಿಡಿ. ಇನ್ನು ಮಾಡುವುದಿಲ್ಲ, ನಿಮ್ಮ ಸುದ್ದಿಗೆ ಬರುವುದಿಲ್ಲ' ಎಂದು ಹೇಳಿದ ಬೇರೇನೂ ಸೊಲ್ಲೆತ್ತದೆ.

# ನಾನು ಸಖಿ

ಸಖಿಗೆ ಸಖಿ ಎಂದು ಹೆಸರಿಟ್ಟದ್ದು ಅವಳ ಅಪ್ಪ. ಮದುವೆಯಾಗುವಾಗ ಗಂಡನ ಮನೆಯವರು ಸಖಿಯ ಹೆಸರು ಬದಲಾಯಿಸಿ ಸರಸ್ವತಿ ಎಂದು ಇಟ್ಟರು. ನನಗೆ ಆಗಲೇ ತುಂಬಾ ಕಸಿವಿಸಿಯಾಗಿತ್ತು. ಸಖಿಯ ಒಳಗೆ ನನಗೆ ಎಟುಕದ ಒಂದು ವಿಶೇಷ ಸಾಮರ್ಥ್ಯವನ್ನು ಗಮನಿಸಿದ್ದೆ ನಾನು. ಇಂತಹವರೂ ಇದಕ್ಕೆಲ್ಲಾ ಒಪ್ಪಿಕೊಳ್ಳುತ್ತಾರಲ್ಲಾ ಎಂದು ಬೇಸರವಾಗಿತ್ತು ನನಗೆ. ಆಕೆಗೆ ಮಾತ್ರ ಅದೊಂದು ವಿಷಯ ಅಂತಾನೇ ಅನಿಸಿದ ಹಾಗೆ ಕಾಣಲಿಲ್ಲ.

ಮದುವೆಯಾದ ಮೊದಲ ದಿನಗಳಲ್ಲಿ ಅವಳನ್ನೊಮ್ಮೆ ಡಾಕ್ಟರ ಬಳಿ ಕರೆದುಕೊಂಡು ಹೋಗಬೇಕಾಗಿತ್ತು. ಹೆಸರು ಕೇಳಿದಾಗ ನಾನು ಸಹಜವಾಗಿಯೇ 'ಸಖಿ' ಎಂದೇ ಹೇಳಿಬಿಟ್ಟೆ. ತಕ್ಷಣ ಅವಳು ಅದನ್ನು ಸರಿಪಡಿಸುವಂತೆ, 'ಅಲ್ಲ ಸರಸ್ವತಿ' ಎಂದಳು.

ಆಮೇಲೆ ಅವಳ ಬದುಕಿನಲ್ಲಿ ಏನೇನೋ ಆಯಿತು. ಗಂಡನ ಮನೆಯಲ್ಲಿ ಆಕೆಗೇನೂ ಸುಖ ಸಿಗಲಿಲ್ಲ. ಬಡತನ, ದುಡಿತ ಇವೆಲ್ಲಾ ಅವಳಿಗೆ ಹೊಸತಲ್ಲ. ಆದರೆ ಸಖಿ ಒಂದು ಖುಷಿಯ, ಗೌರವದ ವಾತಾವರಣದಲ್ಲಿ ಬೆಳೆದಿದ್ದಳು. ಗಂಡನ ಮನೆಯ ನಿರ್ಲಕ್ಷ್ಯ, ಉದಾಸೀನದ ಸಂಬಂಧ, ಪರಸ್ಪರ ಲೆಕ್ಕಾಚಾರದ ವ್ಯವಹಾರ ಇವೆಲ್ಲವೂ ಸರಳವಾದ ಮನಸ್ಸಿನ ಅವಳಿಗೆ ತುಂಬಾ ನೋವು ತಂದಿತ್ತು. ದಿನಕಳೆದಂತೆ ಆರ್ಥಿಕವಾಗಿಯೂ ಅಸಹಾಯಕತೆ ಅನುಭವಿಸ ಬೇಕಾಯಿತು. ಸಖಿ ಅಲ್ಲಿ ಇಲ್ಲಿ ಅದೂ ಇದೂ ಕೆಲಸ ಹಿಡಿಸಿಕೊಳ್ಳತೊಡಗಿ ದಳು. ದುಡಿದು ಸಂಪಾದಿಸತೊಡಗಿದಳು. ತನ್ನ ಬದುಕು ತನ್ನದು, ಅದಕ್ಕೆ ಯಾರನ್ನೂ ಕಾಯಲಿಕ್ಕಿಲ್ಲ ಎಂಬಂತೆ ನಿಭಾಯಿಸತೊಡಗಿದಳು.

ಹೀಗಿರುವಾಗ ಒಂದು ದಿನ ಅವಳು ನಮ್ಮ ಮಹಿಳಾ ಚಿಂತನೆಯ ಸಭೆಯೊಂದಕ್ಕೆ ಬಂದಿದ್ದಳು. ಸ್ವಲ್ಪ ಸೊರಗಿದಂತೆ ಕಂಡರೂ ಸಖಿಯ ಕಣ್ಣುಗಳಲ್ಲಿ ಅದೇ ಒಂದು ಶಕ್ತಿ ಇನ್ನೂ ಇತ್ತು. ಯಾರಿಗೋ ಪರಿಚಯಿಸಬೇಕಾಗಿ ಬಂದಾಗ, ಹಿಂದಿನ ನೆನಪಿನಿಂದ, ಈಕೆ 'ಸರಸ್ವತಿ' ಎಂದು ಹೇಳಿದೆ.

ತಕ್ಷಣ ಸಖಿ 'ಅಲ್ಲ, ನಾನು ಸಖಿ, ನನ್ನ ಹೆಸರು ಸಖಿ' ಎಂದು ಸರಸ್ವತಿಯನ್ನು ಮೆಟ್ಟಿ ನಿಲ್ಲುವಂತೆ ಹೇಳಿದಳು.

# ಯಾಕೆ ವಿಚಾರಿಸುವುದಿಲ್ಲ ?

ಸಖಿಗೆ ಅವು ಕಷ್ಟದ ದಿನಗಳು. ಇಬ್ಬರು ಮಕ್ಕಳನ್ನಿಟ್ಟುಕೊಂಡು ಹೊರಗೆ ಕೆಲಸವೂ ಮಾಡಬೇಕಿತ್ತು, ಗಂಡ ಮನೆ ಕಡೆ ನಿಗಾ ವಹಿಸುತ್ತಿರಲಿಲ್ಲ, ಎಷ್ಟೋ ಸಾರಿ, ಹೇಳದೆ ಕೇಳದೆ ಎಲ್ಲೆಲ್ಲೋ ರಾತ್ರಿ ಕಳೆಯುತ್ತಿದ್ದ. ಸಖಿ, ಆಗಾಗ ಬಂದು ಇವನ್ನೆಲ್ಲಾ ನನ್ನೊಂದಿಗೆ ಹಂಚಿಕೊಳ್ಳುತ್ತಿದ್ದಳು. ನಾನೋ ಇದ್ದ ಬಿದ್ದ ಅನುಭವಗಳನ್ನೆಲ್ಲಾ ಒಟ್ಟು ಹಾಕಿ, ಗಂಡನನ್ನು ಪ್ರತಿಭಟಿಸುವ ದಾರಿಗಳನ್ನು ಹೇಳಿಕೊಡುತ್ತಿದ್ದೆ.

ಹೀಗೆ ಸಾಕಷ್ಟು ಸಮಯ ಕಳೆದ ಮೇಲೆ ಸಖಿ ಯಾಕೋ ಅವಳ ಗಂಡನ ಬಗ್ಗೆ ಏನೂ ಹೇಳದಿರುವುದು ನನ್ನ ಗಮನಕ್ಕೆ ಬಂತು.

'ಏನು ಸಖಿ, ನಿನ್ನ ಗಂಡಂದು ಏನೂ ಸುದ್ದಿ ಇಲ್ಲ, ಸರಿಯಾಗಿದ್ದಾನಾ ಹೇಗೆ ?' ವಿಚಾರಿಸುವಾಗ ನನ್ನ ದನಿಯಲ್ಲಿ ವಿಡಂಬನೆ ಇತ್ತು.

'ಹೌದು ಸರಿಯಾಗಿದ್ದಾನೆ' ಸಖಿಯ ಆತ್ಮವಿಶ್ವಾಸದ ಮಾತು ನನ್ನನ್ನು ಎಚ್ಚರಿಸಿತು.

'ಹೇಗೆ ಸರಿಯಾದ ?' ನಾನು ಕಲಿಸಿಕೊಟ್ಟ ತಂತ್ರಗಳೇನಾದರೂ ಫಲಕಾರಿಯಾಗಿರಬಹುದೇ ಎಂಬ ಕಾತರದಿಂದ ಕೇಳಿದೆ.

ಸಖಿ ಹೇಳಿದಳು, 'ನೀನು ಹೇಳಿಕೊಟ್ಟುದನ್ನೆಲ್ಲಾ ಮಾಡಿ ಮಾಡಿ ಸೋತೆ, ಕೊನೆಗೆ ನನ್ನದೇ ಒಂದು ದಾರಿ ಸಿಕ್ಕಿತು.'

'ಏನದು ?' ತಣ್ಣಗಾಗಿ ಕೇಳಿದೆ. ಸಖಿ ಹೇಳಿದ ಪ್ರಕಾರ,

ಎಂದಿನಂತೆ ಅಂದೂ ಸಖಿಯ ಗಂಡ ಹೇಳದೆ ಕೇಳದೆ ಎಲ್ಲೋ ಉಳಿದುಕೊಂಡು ಮರುದಿನ ಬೆಳಿಗ್ಗೆ ಮನೆಗೆ ಬಂದಿದ್ದ. ಸಖಿ ಅವನ ಕಡೆ ನೋಡಲೂ ಇಲ್ಲ, ಗಮನಿಸಲೂ ಇಲ್ಲ, ಏನೂ ಆಗಿಯೇ ಇಲ್ಲವೆಂಬಂತೆ ತನ್ನ ಪಾಡಿಗೆ ತನ್ನ ಕೆಲಸ ಮಾಡುತ್ತಿದ್ದಳು. ಅವನು ಒಳಗೇ ಹೊರಗೇ ಹೋಗಿ ಸಖಿ ವಿಚಾರಿಸುತ್ತಾಳೇನೋ ಎಂದು ಕಾದ. ಅವಳಿಂದ ಬಹಳ ಹೊತ್ತೂ ಏನೂ ಸುದ್ದಿಯೇ ಬರದೇ ಇದ್ದಾಗ ಅವನ ಚಡಪಡಿಕೆ ಹೆಚ್ಚಾಯಿತು. ತಡೆಯಲಾರದೆ,

'ನಾನು ಯಾಕೆ ಬರಲಿಲ್ಲವೆಂದು ಕೇಳುವುದಿಲ್ಲವೇ ?' ಎಂದು ಕೇಳಿದ.

'ಇಲ್ಲ ಕೇಳುವುದಿಲ್ಲ, ನನಗದು ಬೇಕಾಗಿಲ್ಲ' ಸಖಿಯ ಶೀತಲ ಉತ್ತರ.

'ಹಾಗಾದರೆ ನಾನಿಲ್ಲವಾದರೆ ನಿನಗೇನೂ ತೊಂದರೆ ಇಲ್ಲವೇನೋ' ನಿರ್ಲಕ್ಷ್ಯದಿಂದ ಅಸಹನೆಗೊಂಡ ಗಂಡನ ವ್ಯಂಗ್ಯದ ಪ್ರಶ್ನೆ.

'ಹೌದು ಏನೂ ತೊಂದರೆಯಿಲ್ಲ, ಎಲ್ಲಿ ಬೇಕಾದರೂ ಇರಿ, ಹೇಗೆ ಬೇಕಾದರೂ ಇರಿ. ಈಗ ಬಂದಿದ್ದೀರಲ್ಲಾ, ಒಳಗೆ ಚಹಾ, ತಿಂಡಿ ಇದೆ. ಹೋಗಿ ಹಾಕಿಕೊಂಡು ತಿನ್ನಿ. ನಾನು ಕೆಲಸಕ್ಕೆ ಹೊರಟೆ' ಎಂದು ಸಖಿ ಹೆಗಲಿಗೆ ಬ್ಯಾಗೇರಿಸಿ ನಡೆದೇ ಬಿಟ್ಟಳು.

ಅಂದಿನಿಂದ ಅವನು ಕೇಳದೆ, ಹೇಳದೆ ಹೊರಗೆ ಉಳಿಯಲಿಲ್ಲ.

# ಅಮ್ಮನಿಗೇ ಹೆಚ್ಚು ಶಕ್ತಿ

ಸಖಿಯ ಮಗ, ಆ ದಿನ ಒಂದು ವಿಶೇಷ ಸತ್ಯ ಹೊಳೆದಂತೆ ತಂದೆ ಬಳಿ ಹೇಳಿದ,

'ಅಪ್ಪಾ , ನಿನಗಿಂತ ಅಮ್ಮನಿಗೇ ಹೆಚ್ಚು ಶಕ್ತಿ ಇದೆ ಅಂತ ನನಗೆ ಗೊತ್ತಾಯಿತು'

'ಓಹೋ ಅದು ಹೇಗೆ ?' ಕೇಳಿದರು ಅಪ್ಪ,

'ನೀನು ಬಾವಿಯಿಂದ ನೀರು ತರ್‍ತೀ, ಅಮ್ಮನೂ ತರ್‍ತಾರೆ, ನೀನು ಸೈಕಲ್ ಓಡಿಸ್ತಿ, ಅಮ್ಮನೂ ಓಡಿಸ್ತಾರೆ, ನೀನು ಡಬ್ಬಲ್ ರೈಡ್ ಮಾಡ್ತಿ, ಅಮ್ಮನೂ ಮಾಡ್ತಾರೆ, ನೀನು ಅಂಗಡಿಯಿಂದ ಮೂಟೆ ಸಾಮಾನು ತರ್‍ತಿ ಅಮ್ಮನೂ ತರ್‍ತಾರೆ, ನೀನು ಹೊರಗೆ ಹೋಗಿ ಕೆಲಸ ಮಾಡ್ತಿ, ಅಮ್ಮನೂ ಮೀಟಿಂಗ್, ಅದೂ ಇದೂ ಅಂತ ಕೆಲಸ ಮಾಡ್ತಾರೆ...'

ಇಷ್ಟನ್ನು ಹೇಳಿ ನಿಲ್ಲಿಸಿದಾಗ ಅಪ್ಪ ಹೇಳಿದರು,

'ಅದು ಸರಿ, ಹಾಗಿದ್ದರೆ ಅಪ್ಪ ಅಮ್ಮನಿಗೆ ಸಮಾನ ಶಕ್ತಿ ಇದೆ ಅಂತ ನೀನು ಹೇಳಬೇಕಾಗಿತ್ತು ! ಅವಳಿಗೆ ಹೆಚ್ಚಿದೆ ಅಂತ ಯಾಕೆ ಹೇಳಿದೆ ?'

ಮಗ ಖಚಿತವಾಗಿ ಕಂಡುಕೊಂಡಂತೆ ಹೇಳಿದ,

'ಅಮ್ಮ ಅಡುಗೆ ಮಾಡ್ತಾಳೆ, ನೀನು ಮಾಡುವುದಿಲ್ಲ'.

# ಮಗಳ ಹುಟ್ಟಿದ ಹಬ್ಬ

ಸಖಿಯ ಮಗಳ ಹುಟ್ಟು ಹಬ್ಬ ಸಮೀಪಿಸಿತ್ತು. ಮಗುವಿಗೆ ಸ್ವಲ್ಪ ಸಂತೋಷವಾಗುವ ಮಟ್ಟಿಗಾದರೂ ಏನಾದರೂ ಸಂಭ್ರಮ ಮಾಡಬೇಕೆಂದು ಸಖಿಗೂ ಇಷ್ಟವಿತ್ತು. ಕೆಲವು ತಿಂಗಳ ಹಿಂದೆ ಮಗನ ಹುಟ್ಟು ಹಬ್ಬವನ್ನು ಸ್ವಲ್ಪ ಹೆಚ್ಚೇ ಗೌಜಿಯಲ್ಲಿ ಅವಳ ಗಂಡ ಮುಂದೆ ನಿಂತು ಮಾಡಿದ್ದ. ಸಖಿಗೆ ಅನಗತ್ಯ ಆಡಂಬರ, ಖರ್ಚು ಮಾಡುವ ಅಭ್ಯಾಸವಿರಲಿಲ್ಲ. ಆದರೆ ಹೇಗೋ ಏನೋ 'ಸಂಭ್ರಮ' ಮಾಡುವುದು, ಅವಳದ್ದೇ ರೀತಿಯಲ್ಲಿ ಆಚರಿಸುವುದು ಮಾಡೇ ಮಾಡುತ್ತಿದ್ದಳು.

ಈ ಸಾರಿ ಕೈಯಲ್ಲಿ ಏನೂ ಹಣ ಉಳಿದಿರಲಿಲ್ಲ. ಮಗಳು ಹುಟ್ಟಿದ ಹಬ್ಬ ಬಂತು ಅಂತ ಕುಣಿಯುವುದು ಕಾಣುತ್ತಿತ್ತು. ಗಂಡನಿಂದ ಯಾವುದೇ ಉತ್ಸಾಹ ಕಂಡುಬರಲಿಲ್ಲ. ಸುಮ್ಮನಿದ್ದರಾಗದು ಎಂದು ತಾನೇ ಗಂಡನನ್ನು ಈ ಬಗ್ಗೆ ಕೇಳಿದಳು. ಅವನು ಅಗತ್ಯವೇ ಇಲ್ಲದ ವಿಷಯವೆಂಬಂತೆ, ತನ್ನ ಬಳಿ ಏನೂ ಹಣವಿಲ್ಲವೆಂದುಬಿಟ್ಟ.

'ಪಾಪ ಮಗು, ತಮ್ಮನ ಹುಟ್ಟುಹಬ್ಬ ಮಾಡಿದ್ದನ್ನು ನೋಡಿದ್ದಾಳೆ. ಆಸೆ ಆಗುವುದಿಲ್ಲವೇ?' ಎಂದು ಸಖಿ ಹೇಳಿದಳು.

'ಹೆಣ್ಣು ಮಕ್ಕಳು ಸ್ವಲ್ಪ ಕಷ್ಟ, ಸುಖ ಏನೂಂತ ಕಲೀಬೇಕು. ಆಸೆ ಆದರಾಗಲಿ, ನನ್ನ ಕೈಲಿ ಹಣವಿಲ್ಲ' ಮತ್ತೆ ಹಠದಿಂದ ಗಂಡ ಹೇಳಿದ. 'ನಾನೇನೂ ಹೆಚ್ಚು ಖರ್ಚು ಮಾಡಬೇಕು ಅಂತ ಹೇಳುವುದಿಲ್ಲ. ಅವಳ ನಾಲ್ಕಾರು ಜನ ಸ್ನೇಹಿತರು ಸೇರಲಿ. ಈ ಮಕ್ಕಳಿಗಾದರೂ ಬೇರೆ ಏನಿದೆ ?' ಸಖಿ ಮತ್ತೆ ಒತ್ತಾಯಿಸಿದಳು.

'ನನ್ನ ಬಳಿ ಏನೂ ಹಣವಿಲ್ಲ. ನಾನಂತೂ ಕೊಡುವುದಿಲ್ಲ. ಮಗನ ಹುಟ್ಟುಹಬ್ಬವನ್ನು ಮಾಡಿದ್ದೇನೆ. ಈಗ ಮಗಳದ್ದು ಬೇಕಾದರೆ ನೀನೇ ಮಾಡು' ಇನ್ನು ಮಾತಿಲ್ಲವೆಂಬಂತೆ ನಿಲ್ಲಿಸಿದ.

ಹಣವಿಲ್ಲದಿರುವುದಕ್ಕಿಂತ ಹೆಚ್ಚು ಮನಸ್ಸಿಲ್ಲದಿರುವುದು ಸಖಿಗೆ ಅರ್ಥವಾಯಿತು.

'ಸರಿ, ನಾನೇ ಮಾಡ್ತೇನೆ. ನನಗೆ ಹಣ ಕೊಡಿ'

ಸಖಿ ಹಕ್ಕಿನಿಂದ ಕೇಳಿದಳು.

'ಯಾವ ಹಣ ?' ಗಂಡ ಕೇಳಿದ

"ನನ್ನ ಹಣ" ಸಖಿ, ದೃಢವಾಗಿ ಹೇಳಿದಳು.

'ನಿನ್ನ ಹಣ, ನನ್ನ ಬಳಿ ಎಲ್ಲಿಂದ ?' ಗಂಡ ಅಸಹನೆ, ಕಸಿವಿಸಿಯೊಂದಿಗೆ ಕೇಳಿದ.

'ಮದುವೆಯಾದಾವಾಗಿನಿಂದ ಇಲ್ಲೀವರೆಗೆ ನಿಮ್ಮ ಮನೆಯಲ್ಲಿ ದುಡಿದಿದ್ದೇನಲ್ಲಾ, ಅಡುಗೆ ಮಾಡಿ ಹಾಕಿದ್ದೇನಲ್ಲಾ, ಮುಸುರೆ ತಿಕ್ಕಿದ್ದೇನಲ್ಲಾ, ನಿಮ್ಮ ಬಟ್ಟೆ ಒಗೆದು ಹಾಕಿದ್ದೇನಲ್ಲಾ ಅದರ ಹಣದ ಒಂದು ಸಣ್ಣ ಪಾಲು ಕೊಡಿ. ಸಾಕು, ನಾನೇ ಮಾಡುತ್ತೇನೆ' ಅಂದಳು ಸಖಿ.

ಅವನು ಮತ್ತೆ ಮಾತಾಡಲಿಲ್ಲ. ಇಬ್ಬರೂ ಸೇರಿ ಹುಟ್ಟಿದ ಹಬ್ಬವನ್ನು ಸರಳವಾಗಿ ಖುಷಿಯಿಂದ ಆಚರಿಸಿದರು.

ವಾಣಿ ಪೆರಿಯೋಡಿ

ಗ್ರಾಮೀಣ ಮಹಿಳೆಯರು ಸಮಖ್ಯಾದ ಒಡನಾಟದಲ್ಲಿ

ಇಟ್ಟ ಹೆಜ್ಜೆಗಳು ಇವು

ತಮ್ಮನ್ನು ತಾವು ಕಂಡುಕೊಳ್ಳುತ್ತಾ

ಇಟ್ಟ ಹೆಜ್ಜೆಗಳು ಇವು

ಕನಸುಗಳನ್ನು ನನಸಾಗಿಸುವತ್ತ

ಇಟ್ಟ ಹೆಜ್ಜೆಗಳು ಇವು

ಹೊಸ ಆಲೋಚನೆಗಳನ್ನು ಹುಟ್ಟು ಹಾಕಿದ

ದಿಟ್ಟ ಹೆಜ್ಜೆಗಳು ಇವು.


**ಮಹಿಳಾ ಸಮಖ್ಯಾ ಕರ್ನಾಟಕ**

ನಂ 68, 1ನೇ ಅಡ್ಡರಸ್ತೆ 2ನೇ ಮುಖ್ಯರಸ್ತೆ, ಹೆಚ್. ಎ. ಎಲ್.

3ನೇ ಹಂತ, ಜೀವನ ಭೀಮನಗರ, ಬೆಂಗಳೂರು - 560 075

ಟೆಲಿಫೋನ್ : 080-5277471 / 5262988,

ಫ್ಯಾಕ್ಸ್ : 080-5297765, Email : mahila@mahiti.org